# 'ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು'

ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್) ಪದವಿಯ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ


ಸಂಶೋಧಕರು

ಜಯರಾಮು ಜೆ.

ಮಾರ್ಗದರ್ಶಕರು

ಡಾ. ಎಲ್. ಸಿ. ಸುಮಿತ್ರಾ



ಕುವೆಂಪು ಕನ್ನಡ ಅಧ್ಯಯನ ಕೇಂದ್ರ,

ಕುಪ್ಪಳಿ (ಕನ್ನಡ ವಿಶ್ವ ವಿದ್ಯಾಲಯ, ಹಂಪಿ)

ತೀರ್ಥಹಳ್ಳಿ ತಾಲ್ಲೂಕು.ಶಿವಮೊಗ್ಗ-೫೭೭ ೧೨೬

೨೦೦೭




# 'ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು'

ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್) ಪದವಿಯ ಅವಶಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ

ಸಂಪ್ರಬಂಧ



**ಸಂಶೋಧಕರು**

**ಜಯರಾಮು ಜೆ.**

ಕುವೆಂಪು ಕನ್ನಡ ಅಧ್ಯಯನ ಕೇಂದ್ರ,

ಕುಪ್ಪಳಿ (ಕನ್ನಡ ವಿಶ್ವ ವಿದ್ಯಾಲಯ, ಹಂಪಿ)

ತೀರ್ಥಹಳ್ಳಿ ತಾಲ್ಲೂಕು.

**ಮಾರ್ಗದರ್ಶಕರು**

**ಡಾ. ಎಲ್. ಸಿ. ಸುಮಿತ್ರಾ**

ಪ್ರಾಧ್ಯಾಪಕಿ, ತುಂಗಾ ಮಹಾವಿದ್ಯಾಲಯ, ತೀರ್ಥಹಳ್ಳಿ.




**ಕುವೆಂಪು ಕನ್ನಡ ಅಧ್ಯಯನ ಕೇಂದ್ರ,**

ಕುಪ್ಪಳಿ (ಕನ್ನಡ ವಿಶ್ವ ವಿದ್ಯಾಲಯ, ಹಂಪಿ)

ತೀರ್ಥಹಳ್ಳಿ ತಾಲ್ಲೂಕು.ಶಿವಮೊಗ್ಗ-೫೭೭ ೧೨೬

೨೦೦೭

# ದೃಢೀಕರಣ ಪತ್ರ

ಜಯರಾಮು .ಜೆ ಅವರು 'ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ವಿಭಾಗಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

Sumithra L.

ಡಾ. ಎಲ್. ಸಿ. ಸುಮಿತ್ರಾ

ಡಾ|| ಎಲ್.ಸಿ. ಸುಮಿತ್ರಾ,
ಕನ್ನಡ ಪ್ರಾಧ್ಯಾಪಕರು,
ತುಂಗಾ ಮಹಾವಿದ್ಯಾಲಯ,
ತೀರ್ಥಹಳ್ಳಿ-577432.

ದಿನಾಂಕ : ೧೦|೮|೨೦೦೨

ಸ್ಥಳ : ತೀರ್ಥಹಳ್ಳಿ

'ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ವಿಭಾಗಕ್ಕೆ ಸಲ್ಲಿಸಲು ಡಾ. ಎಲ್. ಸಿ. ಸುಮಿತ್ರಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಜಯರಾಮು ಜೆ.

ದಿನಾಂಕ : 10.೮.02

ಸ್ಥಳ : ಕುಪ್ಪಳಿ.

# ಪರಿವಿಡಿ

## ಅಧ್ಯಾಯ –೧

# ಅಧ್ಯಯನದ ಸ್ವರೂಪ ಆಶಯ ವ್ಯಾಪ್ತಿ.

ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು ಎಂಬ ವಿಷಯದ ಬಗ್ಗೆ ಅಧ್ಯಯನ ಮಾಡಲು ಪ್ರಧಾನವಾಗಿ ಕುವೆಂಪುರವರ ಎರಡು ಕಾದಂಬರಿಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಂಡಿದ್ದೇನೆ. ಅಧ್ಯಯನದ ವಿಸ್ತಾರದ ದೃಷ್ಟಿಯಿಂದ ಪೂರಕ ಪಠ್ಯಗಳಾಗಿ ನವೋದಯ ಸಂದರ್ಭದ ಮತ್ತೊಬ್ಬ ಪ್ರಮುಖ ಲೇಖಕರಾದ ಶಿವರಾಮ ಕಾರಂತರ **ಚೋಮನ ದುಡಿ, ಕುಡಿಯರ ಕೂಸು** ಕಾದಂಬರಿಗಳಲ್ಲಿನ ದಲಿತ ಜೀವನ ಕುರಿತಾದ ಅಂಶಗಳನ್ನು ಗಮನಿಸಲಾಗಿದೆ. ಹಾಗೆಯೆ ದಲಿತ ಸಾಹಿತ್ಯದ ಸಂದರ್ಭದಲ್ಲಿ ದಲಿತ ಲೇಖಕರಿಂದಲೇ ದಾಖಲಾಗಿರುವ ದಲಿತ ಸಮುದಾಯದ ಸ್ವರೂಪವನ್ನು ತಿಳಿದುಕೊಳ್ಳಲು ೭೦ರ ದಶಕದ ಪ್ರಮುಖ ದಲಿತ ಕಾದಂಬರಿಗಳಾದ **ಕುಸುಮಬಾಲೆ, ಒಡಲಾಳ, ಕಾರ್ಯ, ಮರಣಮಂಡಲ ಮಧ್ಯದೊಳಗೆ** ಮುಂತಾದ ಕಾದಂಬರಿಗಳನ್ನು ಅಧ್ಯಯನದ ಉದ್ದೇಶದ ಸಫಲತೆಗಾಗಿ ಬಳಸಿಕೊಳ್ಳಲಾಗಿದೆ. ಕುವೆಂಪು ಕಾದಂಬರಿಗಳ ವಿಮರ್ಶೆಗಳು, ದಲಿತ ಕಾದಂಬರಿಗಳನ್ನು ಕುರಿತಾದ ವಿಮರ್ಶೆಗಳನ್ನು ಅಧ್ಯಯನ ದೃಷ್ಟಿಯಿಂದ ಗಮನಿಸಲಾಗಿದೆ. ಈ ಸಂದರ್ಭದಲ್ಲಿ ದಲಿತರನ್ನು ಕುರಿತು ಬರೆದ ದಲಿತ ಲೇಖಕರಿಗೂ, ದಲಿತರ ಜೀವನವನ್ನು ಕುರಿತು ಬರೆದ ದಲಿತೇತರ ಲೇಖಕರಿಗೂ ಇರುವ ಸಾಮ್ಯ–ಭಿನ್ನತೆಗಳನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

**ದಲಿತಸಾಹಿತ್ಯದ ಪ್ರೇರಣೆ, ಪ್ರಭಾವಗಳು** ಎಂಬ ಅಧ್ಯಾಯದಲ್ಲಿ ದಲಿತ ಸಾಹಿತ್ಯ ನಡೆದು ಬಂದ ದಾರಿಯನ್ನು, ಅದು ಗಳಿಸಿದ ಯಶಸ್ಸುಗಳನ್ನು ಕುರಿತು ಅವಲೋಕಿಸಲಾಗಿದೆ. ದಲಿತ ಅಂಶಗಳನ್ನು ಪ್ರಾಚೀನ ಗ್ರಂಥಗಳಲ್ಲಿ ದಾಖಲಿಸಿರುವ ಹಲವು ಕವಿಗಳ ಮನೋಧರ್ಮವನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ದಲಿತ ಸಾಹಿತ್ಯದ ಪ್ರಭಾವ, ಅದರ ಪ್ರಗತಿಪರಚಿಂತನೆಯ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

**ದಲಿತ ಜಗತ್ತು ಅರ್ಥ ಮತ್ತು ವ್ಯಾಖ್ಯೆ** ಎಂಬ ಅಧ್ಯಾಯದಲ್ಲಿ 'ದಲಿತ' ಪದದ ಅರ್ಥ ಮತ್ತು ವ್ಯಾಖ್ಯೆಗಳನ್ನು ವಿದ್ವಾಂಸರ ಅಭಿಪ್ರಾಯಗಳ ಪರ–ವಿರೋಧವ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಅದೇ ರೀತಿ 'ದಲಿತ ಸಾಹಿತ್ಯ' ಎಂದರೇನು? ಎಂಬ ವಿಚಾರದ ಬಗ್ಗೆಯು ವಿದ್ವಾಂಸರಲ್ಲಿ ಭಿನ್ನಭಿಪ್ರಾಯಗಳಿವೆ. ಈ ಭಿನ್ನಾಭಿಪ್ರಾಯಗಳ ಸತ್ಯಾ ಸತ್ಯತೆಯನ್ನು ಕಂಡು ಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನಿಸಲಾಗಿದೆ. ದಲಿತ ಸಾಹಿತ್ಯದ ಕುರಿತಾದ ಹಲವಾರು ವ್ಯಾಖ್ಯಾನಗಳನ್ನು ಈ ಭಾಗದಲ್ಲಿ ಕೊಡಲಾಗಿದೆ.

ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ ಜಗತ್ತಿಗೂ, ದಲಿತರೇ ಬರೆದಿರುವ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ ಬದುಕಿಗೂ ಏನಾದರೂ ಸಾಮ್ಯ ಭಿನ್ನತೆಗಳಿವೆಯೇ ? ಎಂಬ ಶೋಧನೆಯನ್ನು ನಾಲ್ಕನೇ ಅಧ್ಯಯದಲ್ಲಿ ಮಾಡಲಾಗಿದೆ. ಕನ್ನಡ ಸಾಹಿತ್ಯದ ವಿಮರ್ಶೆಯ ಸಂದರ್ಭದಲ್ಲಿ ಕುವೆಂಪುರವರು ದಲಿತ ಪಾತ್ರಗಳನ್ನು

ಅಮಾನವೀಯವಾಗಿ ಚಿತ್ರಿಸಿದ್ದಾರೆ ಎಂಬ ಅಕ್ಷೇಪಣೆಯನ್ನು ಹಲವು ವಿಮರ್ಶಕರು ಮಾಡಿದ್ದಾರೆ. ಈ ಅರೋಪದ ಸತ್ಯಾ ಸತ್ಯತೆಯನ್ನು ತಿಳಿದುಕೊಳ್ಳುವ ಸಲುವಾಗಿ ದಲಿತ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ ಚಿತ್ರಣವನ್ನು ಹಾಗೂ ಕುವೆಂಪು ಕಾದಂಬರಿಗಳಲ್ಲಿನ ದಲಿತ ಚಿತ್ರಣಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ದಲಿತರ ಕುರಿತಾದ ಕುವೆಂಪುರವರ ದೃಷ್ಟಿಕೋನ ಮತ್ತು ಅವರ ಕಾದಂಬರಿಗಳ ಮೇಲೆ ಅಕ್ಷೇಪಣೆ ಮಾಡಿರುವ ದಲಿತ ಚಿಂತಕರ ದೃಷ್ಟಿಕೋನಗಳನ್ನು ಮುಖಾ-ಮುಖಿ ಮಾಡಲಾಗಿದೆ. ದಲಿತರನ್ನು ಕುರಿತಂತೆ ಕುವೆಂಪುರವರ ದೃಷ್ಟಿಕೋನ ಹಾಗೆಯೇ ವಿಮರ್ಶಕರ ದೃಷ್ಟಿಕೋನ. ಈ ಎರಡು ನೆಲೆಗಳಲ್ಲಿ ಅಧ್ಯಯನ ನಡೆಸಲಾಗಿದೆ. ಪರ-ವಿರೋಧದ ಎಲ್ಲಾ ವಿಮರ್ಶೆಗಳನ್ನು ಗಮನಿಸಿ ವಿಶ್ಲೇಷಣೆಗೆ ಒಳಪಡಿಸಿ ಅಂತಿಮವಾಗಿ ಕುವೆಂಪುರವರು ದಲಿತ ವಿರೋಧಿ ನಿಲುವನ್ನು ತಮ್ಮ ಕಾದಂಬರಿಗಳಲ್ಲಿ ವ್ಯಕ್ತಪಡಿಸದೆ ಉಳಿಗಮಾನ್ಯ ಪದ್ಧತಿಯ ಕ್ರೌರ್ಯವನ್ನು ಬಯಲಿಗೆಳೆದಿದ್ದಾರೆ. ಎಂಬ ನಿರ್ಣಯಕ್ಕೆ ಬರಲಾಗಿದೆ. ಈ ತೀರ್ಮಾನಕ್ಕೆ ಲೇಖಕರ ದೃಷ್ಟಿಕೋನ ಹಾಗೂ ಸಮಕಾಲೀನ ವಿಮರ್ಶಕರ ದೃಷ್ಟಿಕೋನಗಳನ್ನು ಗಮನಿಸಲಾಗಿದೆ.

'ಕುವೆಂಪು ಕಾದಂಬರಿಗಳಲ್ಲಿ ದಲಿತ ಜಗತ್ತು' ಎಂಬ ಅಧ್ಯಯನವನ್ನು ಕೈಗೊಳ್ಳಲು ಹಲವು ಕಾರಣಗಳಿವೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ ಬದುಕು ನಿರ್ಲಕ್ಷ್ಯಕ್ಕೆ ಗುರಿಯಾಗಿದೆ. ದಲಿತರನ್ನು ಕುರಿತು ಬಂದ ಸಾಹಿತ್ಯ ಕೃತಿಗಳು ತುಂಬಾ ಕಡಿಮೆ. ಕಡಿಮೆ ಪ್ರಮಾಣದಲ್ಲಿ ದಾಖಲಾದ ದಲಿತ ಜೀವನ ಚಿತ್ರಗಳು ಹಲವು ಪ್ರತಿಗಾಮಿ ಧೋರಣೆಗಳಿಂದ ಕೂಡಿವೆ. ಅವರ ಬದುಕಿನ ನೈಜ ಚಿತ್ರಣವನ್ನು ಕಟ್ಟಿಕೊಡುವಲ್ಲಿ ಹಲವು ಲೇಖಕರು ವಿಫಲರಾಗಿದ್ದಾರೆ. ಇಲ್ಲಿ ದಾಖಲಾಗಿರುವ ಅನೇಕ ವಿಚಾರಗಳು ದಲಿತರಿಗೆ, ದಲಿತ ಸಂಸ್ಕೃತಿಗೆ ಮಾರಕವಾಗಿದೆ. ಈ ಅಪಾದನೆಯನ್ನು ಕುವೆಂಪು ಕಾದಂಬರಿಗಳ ಮೇಲೂ ಮಾಡಲಾಗಿದೆ. ಇದರ ಸತ್ಯಾ-ಸತ್ಯತೆಯನ್ನು ಕಂಡುಕೊಳ್ಳುವ ಆಶಯವನ್ನು ನನ್ನ ಅಧ್ಯಯನ ಒಳಗೊಂಡಿದೆ.

೧೯೭೦ರ ದಶಕ ದಲಿತರ ದೃಷ್ಟಿಯಿಂದ ತುಂಬಾ ಮಹತ್ವವಾದದು. ಈ ಕಾಲಘಟ್ಟದಲಿ ದಲಿತರನ್ನು ಕುರಿತಾದ ಹೊಸ ವ್ಯಾಖ್ಯಾನಗಳು ರೂಪುಗೊಂಡವು. ಅಂದಿನ ಸಂದರ್ಭದ ಸಾಹಿತ್ಯ ಕೃತಿಗಳಲ್ಲಿ ವಸ್ತು ಭಾಷಾ ಬಳಕೆ ಮತ್ತು ಕೃತಿಕಾರರ ಧೋರಣೆಗಳು ವಿಭಿನ್ನ ಆಯಾಮದಿಂದ ರೂಪುಪಡೆಯಲು ಪ್ರಾರಂಭವಾಯಿತು. ಆಗಿನ ಕಾಲದ ಲೇಖಕರು ದಲಿತರಲ್ಲಿ ಜಾಗೃತಿಯನ್ನು ಮೂಡಿಸಿ ಅವರನ್ನೆಲ್ಲ ಸಂಘಟಿಸುವ ಉದ್ದೇಶದಿಂದ ಸಾಹಿತ್ಯ ರಚನೆಗೆ ತೊಡಗುತ್ತಿದ್ದರು. ಇವರು ಮಾರ್ಕ್ಸ್, ಲೋಹಿಯ, ಅಂಬೇಡ್ಕರ್, ಗಾಂಧೀಜಿ ಮುಂತಾದ ನಾಯಕರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದರು. ಇಂತಹ ಲೇಖಕರು ದಲಿತರಂತೆ ಶೋಷಣೆಗೆ ಒಳಗಾಗಿದ್ದ ಹಲವು ಧಮನಿತ ಸಮಾಜಗಳ ನೈಜ್ಯ ಚಿತ್ರಣಗಳನ್ನು ತಮ್ಮ ಕೃತಿಗಳಲ್ಲಿ ದಾಖಲಿಸುವ, ಅವರ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸುವ ನೆಲೆಯಲ್ಲಿ ತಮ್ಮ ಸೃಜನಶೀಲ ಕೃತಿಗಳನ್ನು ರಚಿಸುತ್ತಿದ್ದರು. ಪುರುಷ ಪ್ರಧಾನ ವ್ಯವಸ್ಥೆಯ ಬಿಗಿಹಿಡಿತದಲ್ಲಿ ಬಂಧಿಯಾಗಿದ್ದ ಮಹಿಳೆಯರು ತಮ್ಮ ಅಭಿವ್ಯಕ್ತಿಯನ್ನು ಸೃಜನಶೀಲ ಬರವಣಿಗೆಯ ಮೂಲಕ ತಮ್ಮ ಸಮಸ್ಯೆಗಳನ್ನು ಸಮಾಜಕ್ಕೆ ತೋರಿಸಿದರು. ಕೆಲವು ಪ್ರಗತಿಪರ ಲೇಖಕರು

ಸಮಾಜದಲ್ಲಿನ ದಲಿತರ, ಮಹಿಳೆಯರ ಸಮಸ್ಯೆಗಳನ್ನು ಕುರಿತಾದ ಹಲವು ಕಾದಂಬರಿಗಳನ್ನು ಬರೆದರು. ದಲಿತರನ್ನು ಕುರಿತು ದಲಿತೇತರರು, ಮಹಿಳೆಯರ ಸಮಸ್ಯೆಗಳನ್ನು ಕುರಿತು ಪುರುಷ ಲೇಖಕರು ಪ್ರಗತಿಪರವಾದವನ್ನು ತಮ್ಮ ಕೃತಿಗಳಲ್ಲಿ ದಾಖಲಿಸಿದರು. ಹೀಗೆ ಬಗೆಬಗೆಯಾದ ಬರಹಗಳನ್ನು ದಾಖಲಿಸಿದ ಲೇಖಕರಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿವೆ. ಈ ಭಿನ್ನತೆಗಳನ್ನು ಗುರುತಿಸುವ ಆಶಯ ನನ್ನ ಅಧ್ಯಯನಕ್ಕಿದೆ.

ನವೋದಯದ ಚಿಂತನೆಗಳನ್ನು ನವ್ಯದ ಹಲವು ವಿದ್ವಾಂಸರು ಪ್ರಶ್ನಿಸಿದ್ದಾರೆ. ಕುವೆಂಪುರವರ ಸಾಹಿತ್ಯ ವಿಚಾರಗಳನ್ನು ನವ್ಯ ವಿಮರ್ಶಕರು ಹಲವು ಆಯಾಮಗಳಿಂದ ವಿಮರ್ಶಿಸಿದ್ದಾರೆ. ಈ ಅಕ್ಷೇಪಣೆಗಳನ್ನು ಇಂದು ಪುನರ್ ವ್ಯಾಖ್ಯಾನಕ್ಕೆ ಗುರಿಪಡಿಸುವ ಅವಶ್ಯಕತೆ ಇದೆ. ಈ ಕಾರಣಕ್ಕಾಗಿ ನನ್ನ ಅಧ್ಯಯನದಲ್ಲಿ ಕುವೆಂಪು ಕಾದಂಬರಿಗಳಲ್ಲಿನ ದಲಿತ ಜಗತ್ತನ್ನು ವಿವಿಧ ದೃಷ್ಟಿಕೋನಗಳಿಂದ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ದಲಿತ ಜಗತ್ತಿನ ಯಾವ ಯಾವ ಅಂಶಗಳು ಆ ಕಾಲದಲ್ಲಿ ಅನಾವರಣಗೊಂಡಿವೆ, ಅದೇ ರೀತಿ ಯಾವ ಅಂಶಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಆಶಯವನ್ನು ನನ್ನ ಅಧ್ಯಯನ ಒಳಗೊಂಡಿದೆ.

ನವೋದಯ ಸಂದರ್ಭದ ಹಲವು ಲೇಖಕರ ಕಾದಂಬರಿಗಳು ದಲಿತ ಜೀವನ ಕ್ರಮವನ್ನು ಅವರದೆ ಆದ ದೃಷ್ಟಿಕೋನದಿಂದ ಚಿತ್ರಿಸಿದ್ದಾರೆ. ೭೦ನೇ ದಶಕದ ದಲಿತ ಸಾಹಿತ್ಯವು ಅಂದಿನ ಲೇಖಕರ ಮನೋಭಾವದ ಕಾರಣಗಳಿಗಾಗಿ ತನ್ನ ದೃಷ್ಟಿಕೋನದ ಹಿನ್ನಲೆಯಲ್ಲಿ ದಲಿತ ಪಾತ್ರಗಳನ್ನು ಚಿತ್ರಿಸಿರುವುದನ್ನು ನೋಡಬಹುದು. ಕುವೆಂಪು ಮತ್ತು ಕಾರಂತರ ಕಾದಂಬರಿಗಳು ಮೇಲಿನ ಅಂಶಗಳನ್ನು ಒಳಗೊಂಡಿವೆ.

ಪ್ರಸ್ತುತ ಅಧ್ಯಯನದಲ್ಲಿ ನವೋದಯ ಸಂದರ್ಭದ ಕಾದಂಬರಿಕಾರರ ದೃಷ್ಟಿಕೋನ ಹಾಗೂ ದಲಿತ ಸಾಹಿತ್ಯ ಸಂದರ್ಭದ ದಲಿತ ಲೇಖಕರ ದೃಷ್ಟಿಕೋನಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಯನದ ಅಕರ ಗ್ರಂಥಗಳಾಗಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಗಳನ್ನು ಮುಖ್ಯವಾಗಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಈ ಕಾದಂಬರಿಗಳಿಗೆ ಪೂರಕವಾಗಿ ನವೋದಯ ಸಂದರ್ಭದ ಶಿವರಾಮ ಕಾರಂತರ 'ಚೋಮನ ದುಡಿ', 'ಕುಡಿಯರ ಕೂಸು' ಕಾದಂಬರಿಗಳನ್ನು ದಲಿತ ಹಿನ್ನಲೆಯಲ್ಲಿ ಗಮನಿಸಲಾಗಿದೆ. ಅದೇ ರೀತಿ ಎಸ್. ಎಲ್. ಭೈರಪ್ಪನವರ 'ದಾಟು' ಕಾದಂಬರಿಯಲ್ಲಿನ ದಲಿತ ಪಾತ್ರ ಚಿತ್ರಣಗಳಲ್ಲಿನ ನಿಲುವುಗಳನ್ನು ಸಹ ನೋಡಲಾಗಿದೆ.

ಅರವಿಂದ ಮಾಲಗತ್ತಿಯವರ 'ಕಾರ್ಯ' ದೇವನೂರ ಮಹಾದೇವರವರ 'ಒಡಲಾಳ', ಕುಸುಮಬಾಲೆ, ಮುಳ್ಳೂರು ನಾಗರಾಜರವರ 'ಮರಣಮಂಡಲ ಮಧ್ಯದೊಳಗೆ' ಈ ಕಾದಂಬರಿಗಳಲ್ಲಿನ ದಲಿತ ಪಾತ್ರಗಳನ್ನು ಕುರಿತಾದ ಸ್ವರೂಪವನ್ನು ನವೋದಯ ಕಾಲಘಟ್ಟದ ಲೇಖಕರ ದಲಿತ ಪಾತ್ರ ಚಿತ್ರಣದ ರೀತಿಗಳ ಜೊತೆಗೆ ಹೋಲಿಸಿ ನೋಡುವ ಕಾರಣಕ್ಕಾಗಿ ಈ ಕಾದಂಬರಿಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದೇನೆ.

# ಅಧ್ಯಾಯ – ೨

# ದಲಿತ ಸಾಹಿತ್ಯದ ಪ್ರೇರಣೆ – ಪ್ರಭಾವಗಳು

ಭಾರತದ ಸಂದರ್ಭದಲ್ಲಿ ಅಸ್ಪೃಶ್ಯತೆಯ ಉಗಮ ಪ್ರಭಾವ ಹಾಗೂ ಪ್ರೇರಣೆ. ಇದು ಭಾರತೀಯ ಸಮಾಜಗಳಲ್ಲಿ ಉಂಟುಮಾಡುತ್ತಿರುವ ಪ್ರತಿಕೂಲ ಪರಿಣಾಮವನ್ನು ನಾವು ಅನೇಕ ಇತಿಹಾಸಕಾರರಿಂದ ತಿಳಿದುಕೊಳ್ಳಬಹುದು. ಅಸ್ಪೃಶ್ಯರು ಭಾರತದ ಮೂಲ ನಿವಾಸಿಗಳು ಎಂಬ ಅಭಿಪ್ರಾಯವನ್ನು ಹಲವು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಮತ್ತೆ ಕೆಲವರು ಇದನ್ನು ವಿರೋಧಿಸಿದ್ದಾರೆ. ಏಕೆಂದರೆ ಅಸ್ಪೃಶ್ಯರಿಗಿಂತ ಹಿಂದೆ ಕಿರಾತರು ಅಥವಾ ನಿಷಾದರು ಎಂಬ ಬುಡಕಟ್ಟುಗಳಿದ್ದವೆಂದು ನಂಬುತ್ತಾರೆ. ಆರ್ಯರು ಮಧ್ಯ ಏಷ್ಯಾದಿಂದ ಭಾರತದ ಉತ್ತರ ಭಾಗಕ್ಕೆ ಬಂದಂತಹ ಸಂದರ್ಭದಲ್ಲಿ ಅವರಿಗೆ ಪ್ರತಿರೋಧವನ್ನು ತೋರಿದವರು ಇವರೆ ಎಂಬ ನಂಬಿಕೆ ಇದೆ. ಆ ಕಾರಣಕ್ಕಾಗಿ ಈಗಿನ ದಲಿತರು ಭಾರತದ ಮೂಲ ನಿವಾಸಿಗಳಲ್ಲ ಎಂಬ ಹೇಳಿಕೆಯಿದೆ. ಆದರೆ ನಿಷಾದ, ಫಣಿ ಹಾಗೂ ಕಿರಾತರೆಂಬ ಜನ ಸಮುದಾಯ ಸಪ್ತ ಸಿಂಧೂ ಬಯಲಿನಲ್ಲಿ ಇದ್ದ ವಿಷಯವನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಇವರು ವೀರರು, ಸಂಪತ್ತುಳ್ಳವರು ಆಗಿದ್ದರು. ಇವರು ಆದಿಮ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಅಸ್ಪೃಶ್ಯರೆಂದು ಇತಿಹಾಸಕಾರರು ಗುರ್ತಿಸಿದ್ದಾರೆ. ಆರ್ಯರ ಆಗಮನಕ್ಕಿಂತ ಪೂರ್ವದಲ್ಲಿ ದ್ರಾವಿಡರು (ಈಗ ಗುರ್ತಿಸಿರುವ ದಲಿತರು) ಸಪ್ತ ಸಿಂಧೂ ಬಯಲಿನಲ್ಲಿ ಇದ್ದರು ಎಂಬದನ್ನು ಒಂದು ವಿಚಾರ ಮನದಟ್ಟು ಮಾಡುತ್ತದೆ. ಅದೆಂದರೆ ಸಿಂಧೂ ಬಯಲಿನಿಂದ ಗಂಗಾ ಬಯಲಿಗೆ ಆರ್ಯ ಸಂಸ್ಕೃತಿ ಪಲ್ಲಟವಾಗಿವುದನ್ನು ಗುರುತಿಸಿದ್ದಾರೆ.

ಪ್ರಾಚೀನ ಕಾಲದಲ್ಲಿ ಭೂಮಿಯ ಒಡೆತನ ಇಂದಿನಂತೆ ತುಂಡು ತುಂಡಾಗಿರಲಿಲ್ಲ. ಅದು ಒಟ್ಟಾಗಿಯೇ ಇತ್ತು. ಅಂದಿನ ಆದಿ ಮಾನವರು ಮರದ ಹಣ್ಣು, ಬೇರಿನಿಂದ ತಮ್ಮ ಹೊಟ್ಟೆಯ ಹಸಿವನ್ನು ತಣಿಸಿಕೊಳ್ಳುತ್ತಿದ್ದರು. ಅವರು ಜೀವನ ನಿರ್ವಹಣೆಗಾಗಿ ಭೂಮಂಡಲದ ಎಲ್ಲಾ ಖಂಡಗಳಲ್ಲಿಯು ಸಂಚರಿಸುತ್ತಿದ್ದರು. ಭಾತರಕ್ಕೆ ಆಸ್ಟ್ರೇಲಿಯಾ ಖಂಡದ ಬುಡಕಟ್ಟು ಜನಾಂಗಗಳಾದ ಕೋಲ್, ಮುಂಡ ಮತ್ತು ಗೊಂಡ ಎಂಬ ಜನಾಂಗಗಳು ಬರುತ್ತಿದ್ದವು. ಇವುಗಳಂತೆ ಇತರ ಭೂ ಪ್ರದೇಶಗಳಿಂದ ಅನೇಕರ ಬುಡಕಟ್ಟು ಜನರು ಬಂದು ನೆಲೆಸುತ್ತಿದ್ದರು. ಭಾತರದ ಉತ್ತರ ಭಾಗಕ್ಕೆ 'ಆಲ್ಫಸ್' ಪರ್ವತದಿಂದ ಬಂದ ದ್ರಾವಿಡರು ಅಲ್ಲಿ ನೆಲೆಸಿದರು. ಇವರು ಆ ಮೊದಲು ಅಲ್ಲಿ ವಾಸವಿದ್ದ ಬುಡಕಟ್ಟು ಜನಾಂಗಗಳನ್ನು ಓಡಿಸಿ ತಮ್ಮ ಸಂಸ್ಕೃತಿಯನ್ನು ಸ್ಥಾಪಿಸಿದರು. ಇವರು ಅಕ್ಷರಲ್ಲಾಗಲೆ ನಾಗರಿಕತೆಯ ಜ್ಞಾನವನ್ನು ಹೊಂದಿದ್ದರು. ಈ ಕಾರಣದಿಂದಾಗಿ ಹರಪ್ಪ ಮತ್ತು ಮೆಹೆಂಜೋದಾರೋಗಳಂತಹ ಮಹಾನಗರಗಳನ್ನು ಸ್ಥಾಪಿಸಿಕೊಂಡು ತಮ್ಮ ಆಡಳಿತ ನಡೆಸಲು ಪ್ರಾರಂಭಿಸಿದರು.

ಏಷ್ಯಾ ಮೈನರದಲ್ಲಿ ನೆಲೆಸಿದ್ದ ಆರ್ಯರು ನಾಲ್ಕು ಭಾಗಗಳಾಗಿ ವಿಂಗಡಣೆಗೊಂಡು ಗ್ರೀಕ್, ಇರಾನ್, ಚೈನಾ ಮತ್ತು ಭಾರತದ ಕಡೆಗೆ ಜೀವನ ನಿರ್ವಹಣೆಗಾಗಿ ಹೋರಟರು. ಭಾರತವನ್ನು ಆರ್ಯರ ತಂಡ 'ಖೈಬರ್' ಕಣಿವೆಯ ಮೂಲಕ ಪ್ರವೇಶಿಸಿತು. ಆಯ್ರರು ಶೂರರು, ಧೀರರಾಗಿದ್ದರು. ಇವರು ದ್ರಾವಿಡರ ನೆಲೆಗಳನ್ನು ವಶಪಡಿಸಿಕೊಂಡು ದ್ರಾವಿಡರನ್ನು ದಕ್ಷಿಣಕ್ಕೆ ಓಡಿಸಿದರು. ದ್ರಾವಿಡರು ದಕ್ಷಿಣಕ್ಕೆ ಬಂದಾಗ ಉತ್ತರದಲ್ಲಿ ಆರ್ಯರು ತಮ್ಮ ವೈಧಿಕ ಸಂಸ್ಕೃತಿಗೆ ಭದ್ರ ಬುನಾದಿಯನ್ನು ಹಾಕಿದ ಅಂಶ ತಿಳಿದು ಬರುತ್ತದೆ. ದಕ್ಷಿಣಕ್ಕೆ ಬಂದ ದ್ರಾವಿಡರು ಇಲ್ಲಿ ತಮ್ಮ ಸಂಸ್ಕೃತಿಯನ್ನು ಪುನರ್ ಸ್ಥಾಪಿಸಿದರು. ಒಂದು ಹಂತದಲ್ಲಿ ಈ ಎರಡು ಸಂಸ್ಕೃತಿಗಳು ಒಂದಾಗಿ ಬರೆತುಕೊಂಡವು. ಇದು ಮೇಲು–

ಕೀಳು ಎಂಬ ಅಸಮಾನತೆಗೆ ಕಾರಣವಾಯಿತು. ಹೀಗೆಯೆ ಪ್ರಭುತ್ವದ ಅಧೀನಕ್ಕೆ ಒಳಪಟ್ಟ ಸಂಸ್ಕೃತಿ ಕಟೆಗಣಿಸಲ್ಪಟ್ಟಿತು. ಈ ಕಾರಣಗಳಿಂದಾಗಿ ದಲಿತರ ಸಮಗ್ರ ಇತಿಹಾಸವನ್ನು ತಿಳಿಯಲು ಮೇಲಿನ ಅಂಶಗಳು ತೊಡಕಾಗಿವೆ.

ಆದರೂ ದಲಿತರ ಇತಿಹಾಸವನ್ನು ಗುರುತಿಸಲು ಹಲವಾರು ಇತಿಹಾಸಕಾರರು ಪ್ರಯತ್ನಿಸಿದ್ದಾರೆ. ಪ್ರಾಚೀನ ದಲಿತರ ಚರಿತ್ರೆಯ ಬಗ್ಗೆ ಕೋಸಾಂಬಿ, ಶ್ರೀವಾತ್ಸವ, ಅಂಬೇಡ್ಕರ್, ಸ್ಮಿತ್, ಹರ್ಮನ್ ಕುಲ್ಕೆ, ನೆಬುರು ಕಾರಶಿಮ ಮುಂತಾದ ಇತಿಹಾಸಕಾರರು ಶ್ರಮಿಸಿದ್ದಾರೆ. ಈ ನಿಟ್ಟಿನಲ್ಲಿ ಹಲವು ಮಹತ್ವದ ಶೋಧಗಳನ್ನು ನಡೆಸಿದ್ದಾರೆ. ಡಿ. ಡಿ. ಕೋಸಾಂಬಿಯವರು ವೇದಗಳ ಕಾಲದ ವರ್ಣ ವ್ಯವಸ್ಥೆ-ಚಾತುರ್ವರ್ಣದ ವ್ಯವಸ್ಥೆಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಇವರು ಕ್ರಿ. ಪೂ. ೫೦೦ ರಿಂದ ಕ್ರಿ. ಶ. ೫೦೦ರ ವರೆಗಿನ ದಲಿತರ ಚಿತ್ರಣಗಳನ್ನು ನೀಡಲು ಶ್ರಮಿಸಿದ್ದಾರೆ. ಋಗ್ವೇದ, ಪುರಾಣಗಳಲ್ಲಿ ದಲಿತ, ದಸ್ಸು, ದಾತರ ಎಂಬ ಪದಗಳ ಉಲ್ಲೇಖವಿರುವುದನ್ನು ಕಂಡು ಹಿಡಿದಿದ್ದಾರೆ. ವಾಲ್ಮಿಕಿ, ಶಬರಿ, ವ್ಯಾಸ, ಕಾಳಿದಾಸ, ಏಕಲವ್ಯ, ಗೌತಮಬುದ್ಧ, ಶಂಭೂಕ, ಬೇಡರ ಕಣ್ಣಪ್ಪ ಮುಂತಾದವರು ದಲಿತ ಪ್ರಜ್ಞೆಯ ಚಿಂತಕರು ಎಂಬುದಾಗಿ ಗುರ್ತಿಸಿದ್ದಾರೆ.

ಶೂದ್ರರು ಎಂದೂ ಶಾಶ್ವತವಾದ ಲಾಭವನ್ನು ಪಡೆದಿಲ್ಲ ಸಮಾಜದಲ್ಲಿ ದ್ವಿಜರೆಂದು ಕರೆಯಲ್ಪಡುವ ಉತ್ತಮ ಜಾತಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ಈ ಲಾಭವನ್ನು ಆಂದಿನಿಂದ ಇಂದಿನವರೆವಿಗೂ ಪಡೆದುಕೊಂಡು ಬಂದಿದ್ದಾರೆ. ಶೂದ್ರರಿಗೆ ಜ್ಞಾನ- ಸ್ಥಾನ ಮಾನಗಳಿಂದ ದೂರವಿಟ್ಟು ಅವರ ಅಜ್ಞಾನವನ್ನು ಬಂಡವಾಳವನ್ನಾಗಿಸಿಕೊಂಡು ಅವರನ್ನು ಗುಲಾಮರಂತೆ ನಡೆಸಿಕೊಂಡು ಬದಲಾಗುತ್ತಿರುವ ಅಂಶವನ್ನು ಇತಿಹಾಸ ಕೃತಿಗಳಿಂದ ತಿಳಿಯಬಹುದಾಗಿದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಚಿತ್ರಣಗಳನ್ನು ಆದಿಕವಿ ಪಂಪನಿಂದ ಗುರುತಿಸಬಹುದಾಗಿದೆ. ಪಂಪನು ಕರ್ಣನಂತಹ ಕೆಳಜಾತಿಯ ವ್ಯಕ್ತಿಯನ್ನು ಮಹಾಭಾರತದಂತಹ ವೈದಿಕ ಸಾಹಿತ್ಯದಲ್ಲಿ ಮೆರೆಸಿದ್ದಾನೆ. ಪಂಪ ಹೀಗೆ ತನ್ನ ಕೃತಿಯಲ್ಲಿ ಕೆಳಜಾತಿಗಳ ಬಗ್ಗೆ ಅಭಿಮಾನ ಹೊಂದಲು ಕಾರಣ ಆತನಿಗೆ ಇದ್ದ ಇತಿಹಾಸ ಪ್ರಜ್ಞೆ ಕಾರಣವಿರಬೇಕು ಎನಿಸುತ್ತದೆ. ಏಕೆಂದರೆ ಪಂಪನಿಗಿಂತ ಮುಂಚೆ ಬೌದ್ದಧ ಧರ್ಮ ಶೋಷಿತರ ಪರವಾದ ವಿಚಾರಗಳನ್ನು ಹೊಂದಿತ್ತು. ಜೈನ ಪರಂಪರೆಯು ಸಹ ಅಹಿಂಸೆ, ಅಧರ್ಮವನ್ನು ಬೊಧಿಸುವುದರಿಂದ ಈ ಧರ್ಮಗಳಿಂದ ಪಂಪನು ಪ್ರೇರಣೆ ಪಡೆದಿರುವ ಸಾಧ್ಯತೆ ಇದೆ. ಈ ಕಾರಣಕ್ಕಾಗಿ ಪಂಪನು ಶೋಷಿತರ ಪರವಾದ ನಿಲುವನ್ನು ತನ್ನ ಪ್ರಾರಂಭದ ಕೃತಿಯಲ್ಲಿ ಅಭಿವ್ಯಕ್ತಪಡಿಸಿದ್ದಾನೆ.

ಬೌದ್ಧ ಧರ್ಮವು ಅಂದಿನ ಸಮಾಜದಲ್ಲಿದ್ದ ಅಸಮಾನತೆಯನ್ನು ತೀರ್ವವಾಗಿ ವಿರೋಧಿಸಿತು. ವೈದಿಕ ಧರ್ಮದ ಅಸಮಾನತೆಯನ್ನು ಖಂಡಿಸಿ, ಅಲ್ಲಿ ತನ್ನದೆ ಆದ ಹಲವು ಪ್ರಗತಿಪರ ವಿಚಾರಗಳನ್ನು ಪ್ರತಿಪಾದಿಸಿತು. ಮನುಷ್ಯ ಮನುಷ್ಯರ ನಡುವಿನ ಅಂತರವನ್ನು ಕಡಿಮೆ ಮಾಡಿತು. ವೈಧಿಕ ಧರ್ಮ ನಿರ್ಮಿಸಿದ್ದ ದೇವರು ಮತ್ತು ಅಸ್ಪೃಶ್ಯರ ನಡುವಿನ ದೂರವನ್ನು ಈ ಧರ್ಮ ಕಡಿಮೆ ಮಾಡಿತು. ಬುದ್ಧನ ತತ್ವಗಳು ವೈಜ್ಞಾನಿಕವಾಗಿದ್ದವು. ಇವು ಜೀವ ಪರವಾದ ಧೋರಣೆಗಳನ್ನು ಹೊಂದಿದ್ದವು. ಹೀಗಾಗಿ ಮಾನವರಲ್ಲಿ ಪ್ರೀತಿ, ಕರುಣೆ, ಸಹೋದರತೆಯನ್ನು ಈ ಧರ್ಮ ಭೋದಿಸುತಿತ್ತು. ಬೌದ್ಧ ಧರ್ಮದಲ್ಲಿ ಪುರುಷ-ಮಹಿಳೆ, ಸ್ಪೃಶ್ಯ-ಅಸ್ಪೃಶ್ಯ ಎಂಬ ಭೇದ-ಭಾವಗಳಿಗೆ ಅವಕಶವಿರಲಿಲ್ಲ, ಮಹಿಳೆಯರು ಹಾಗೂ ವಿಶೇಷವಾಗಿ ಧಮನಿತ ಜನಾಂಗದವರ ಉದ್ಧಾರಕ್ಕಾಗಿ ಈ ಧರ್ಮವು ಶ್ರಮಿಸಿತು. ಮುಂದೆ ೧೨ ಶತಮಾನದಲ್ಲಿ ವಚನಕಾರರು ಬೌದ್ಧ ಧರ್ಮದ ತತ್ವಾಂಶಗಳನ್ನು ತಮ್ಮಲ್ಲಿ ಮೈಗೂಡಿಸಿಕೊಂಡರು.

ಕರ್ನಾಟಕದಲ್ಲಿ ೧೨ನೇ ಶತಮಾನ ಸಾಹಿತ್ಯ ದೃಷ್ಟಿಯಿಂದ ತುಂಬ ಮಹತ್ವವಾದ ಶತಮಾನವಾಗಿದೆ. ಈ ಶತಮಾನದ ಚಿಂತಕರು ಅಲ್ಲಿಯವರೆವಿಗೂ ಪ್ರಚಲಿತದಲ್ಲಿದ್ದ ವೈಧಿಕ ಶಾಹಿಯ ಅನೇಕ ನಿಯಮಗಳನ್ನು ಅವರು ತಮ್ಮ ವಚನಗಳ ಮೂಲಕ ಪ್ರಶ್ನಿಸಿದರು. ಪುರೋಹಿತ ಶಾಹಿಯ ಧರ್ಮದ ಬಂಧನದಿಂದ ಅಸ್ಪೃಷ್ಯ ಶೂದ್ರ ಸಮುದಾಯವನ್ನು ಬಿಡುಗಡೆ ಮಾಡಿದರು. ಇದು ದಲಿತ ಚಿಂತನೆಯ ಪ್ರಮುಖವಾದ ಕಾಲಘಟ್ಟವಾಗಿದೆ. ಈ ಸಾಹಿತ್ಯ ಚಳುವಳಿ ಹಾಗೂ ಸಾಮಾಜಿಕ ಚಿಂತನೆಯ ಹರಿಕಾರರಾದ ಬಸವಣ್ಣನವರು ಹಲವು ರೀತಿಯ ಚಳುವಳಿಗಳಿಗೆ ಕಾರಣರಾದರು. ಅವರು ಶರಣಚಳುವಳಿ, ಜಾತಿ ವ್ಯವಸ್ಥೆ, ಪುರೋಹಿತಶಾಹಿಯ ನಿಲುವುಗಳ ಬಗ್ಗೆ ತಮ್ಮ ವಚನಗಳಲ್ಲಿ ತೀಕ್ಷ್ಣ ಪ್ರತಿಕ್ರಿಯೆಯನ್ನು ನೀಡುತ್ತಿದ್ದರು. ವಚನಕಾರರು ಅನುಭವ ಮಂಟಪದ ಮೂಲಕ ಸಮಾಜದ ಪ್ರಗತಿಯ ಬಗ್ಗೆ ಚಿಂತಿಸುತ್ತಿದ್ದರು. ಅವರು ಜಾತೀಯತೆ, ಮನುಷ್ಯತ್ವ ಮೇಲು-ಕೀಳು, ಹಿಂಸೆ-ಅಹಿಂಸೆ, ಸತ್ಯ-ಸುಳ್ಳು ಇತ್ಯಾದಿಗಳ ಬಗ್ಗೆ ಚಿಂತಿಸಿ ಮಾನವಿಯತೆಯ ಪರವಾದ ನಿಲುವನ್ನು ಪ್ರಕಟಿಸುತ್ತಿದ್ದರು. ಜಾತಿ ವಿನಾಶ ಹಾಗೂ ಅಂತರಜಾತಿಯ ವಿವಾಹಗಳ ಬಗ್ಗೆ ವಿಶೇಷ ಕಾಳಜಿಯನ್ನು ಹೊಂದಿದ್ದರು. ವಚನಗಳಿಂದ ಮೊಟ್ಟ ಮೊದಲ ಬಾರಿಗೆ ಧ್ವನಿ ಕಳೆದುಕೊಂಡಿದ್ದ ಅಸ್ಪೃಶ್ಯ ಜನಾಂಗ, ಶೋಷಿತ ವರ್ಗದವರು ತಮ್ಮ ಅಭಿವ್ಯಕ್ತಿಯನ್ನು ಮೊಟ್ಟ ಮೊದಲ ಬಾರಿಗೆ ವಚನಗಳಲ್ಲಿ ದಾಖಲಿಸಿದರು. ಸ್ವತಃ ಬಸವಣ್ಣನವರು 'ಕುಲವೇಳು-ಹದಿನೆಂಟು ಜಾತಿಗಳು ಒಂದು' ಎಂಬ ಅಭಿಪ್ರಾಯವನ್ನು ಹೊಂದಿದ್ದರು. ವಚನಕಾರರ ಎಲ್ಲಾ ಆದರ್ಶಗಳು ೧೪-೧೫ನೇ ಶತಮಾನದ ಹೊತ್ತಿಗೆ ತಮ್ಮ ಪ್ರಭಾವವನ್ನು ಕಳೆದುಕೊಂಡವು ಏಕೆಂದರೆ ಈ ಸಂದರ್ಭದ ಶರಣರೆಲ್ಲರು ಒಂದಾಗಿ 'ವೀರಶೈವ' ಎಂಬ ಧರ್ಮವನ್ನು ಸ್ಥಾಪಿಸಿಕೊಂಡರು. ಇದು ಭಾರತದ ಸಂದರ್ಭದಲ್ಲಿನ ಜಾತೀಯತೆಯ ಮಹತ್ವವನ್ನು ತಿಳಿಸುತ್ತದೆ. ಇತಿಹಾಸವನ್ನು ಗಮಸಿದರೆ ಕ್ರಿ. ಶ. ೫ನೇ ಶತಮಾನದಿಂದ ೧೮-೧೯ನೇ ಶತಮಾನದವರೆವಿಗೂ ಕನ್ನಡ ಸಾಹಿತ್ಯ ಧರ್ಮದ ಕರಿನೆರಳಿನಲ್ಲಿ ಬೆಳೆದುಕೊಂಡು ಬಂದಿರುವುದನ್ನು ಗಮನಿಸಬಹುದು.

ವಚನ ಸಾಹಿತ್ಯವು ಕೊನೆಗೊಂಡ ನಂತರ ಅವರ ಸಾಹಿತ್ಯ ಚಿಂತನೆಗಳು ಮೂಲೆ ಗುಂಪಾದವು. ವಚನಕಾರರ ಸಾಮಾಜಿಕ ಚಿಂತನೆಗಳಿಗೆ ತಾತ್ಕಲಿಕ ವಿರಾಮ ಸಿಕ್ಕಿತು. ಈ ಸಂಪ್ರದಾಯವನ್ನು ಮುಂದಿನ ಯಶಸ್ವಿ ಕವಿಗಳಾದ ಹರಿಹರ ಮತ್ತು ರಾಘವಾಂಕರು ನಡೆಸಿಕೊಂಡು ಹೊದುದನ್ನು ಕನ್ನಡ ಸಾಹಿತ್ಯದ ಇತಿಹಾಸ ತಿಳಿಸುತ್ತದೆ. ಹರಿಹರನ ರಗಳೆಗಳು ಅಸ್ಪೃಷ್ಯ ಸಮುದಾಯದ ಜೀವನ ಚಿತ್ರಣವನ್ನು ನೀಡುತ್ತದೆ. ಹರಿಹರನ ರಗಳೆಗಳ ನಾಯಕರು ಶಿವಭಕ್ತರು ಇವರು ಅಸ್ಪೃಶ್ಯ ಮೂಲದಿಂದ ಬಂದವರಾಗಿರುವುದು ರಗಳೆಗಳಲ್ಲಿನ ವಿಶೇಷ. ಮದಾರಚೆನ್ನಯ್ಯನ ರಗಳೆ ಮೇಲಿನ ಹೇಳಿಕೆಯನ್ನು ಪುಷ್ಟಿಕರಿಸುತ್ತದೆ. ಇದು ಹರಿಹರನ ಮುಖ್ಯ ರಗಳೆಗಳಲ್ಲಿ ಒಂದು ಹರಿಹರನು ಸಾಹಿತ್ಯ ರಚನೆ ಮಾಡುವಂತಹ ಸಂದರ್ಭದಲ್ಲಿ ಆತನಿಗೆ ಹಲವಾರು ನಿರ್ಬಂಧನೆಗಳಿದ್ದವು. ಏಕೆಂದರೆ ಆಗ ತಾನೇ ವೀರಶೈವ ಧರ್ಮ ತನ್ನ ರೂಪವನ್ನು ಪಡೆಯುತಿತ್ತು. ಇಂತಹ ಸಂದರ್ಭದಲ್ಲಿ ಬಸವಣ್ಣನವರ ಕನಸಿನ ಸಮಾಜದ ಪ್ರಗತಿಗಾಗಿ ಆತ ದುಡಿಯಲೇಬೆಕಾಗಿತ್ತು. ಈ ಒತ್ತಡಗಳ ನಡುವೆಯು ದಲಿತರಪರವಾದ ಚಿಂತನೆಯನ್ನು ಸಮಗ್ರವಾಗಿ ತನ್ನ ಸಾಹಿತ್ಯದಲ್ಲಿ ರೂಪಿಸಲು ಪ್ರಯತ್ನಿಸಿದನು. ಹರಿಹರನು ಮಾನವರ ನಡುವಿನ ವರ್ಣವರ್ಗದ ಗೋಡೆಗಳನ್ನು ಕೆಡವಿಹಾಕಲು ಪ್ರಯತ್ನಿಸಿದ ಅದರಂತೆ ಯಶಸ್ವಿಯಾದನೆಂದು ಗುರುತಿಸಬಹುದು. ನಂತರ ಬಂದ ಇವನ ಅಳಿಯ ರಾಘವಂಕನು ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆಯರ ಪ್ರಸಂಗವನ್ನು ತನ್ನ ಕೃತಿಯಲ್ಲಿ ತಂದಿದ್ದಾನೆ. ಹರಿಶ್ಚಂದ್ರನ ಪ್ರಭುತ್ವದ ನಿಲುವುಗಳು ಅವನ ಅವನತಿಗೆ ಕಾರಣವಾಗುವ ಅಂಶವನ್ನು ಈ ಕಾವ್ಯದಲ್ಲಿ ವಿವೇಚಿಸಿದ್ದಾನೆ. ಹೊಲತಿಯರಿಗೆ ಅವಮಾನ ಗೊಳಿಸಿದ

ಕಾರಣಕ್ಕಾಗಿ ಆತ ತನ್ನ ಸಾಮ್ರಾಜ್ಯವನ್ನು ಕಳೆದುಕೊಳ್ಳಬೇಕಾಗುತ್ತದೆ. ಈ ಅವಮಾನದ ಪರಿಣಾಮ ಎಲ್ಲಿಯವರೆಗೆ ಹೊಗುತ್ತದೆ, ಎಂದರೆ ಹರಿಶ್ಚಂದ್ರನ ಬದುಕಿನ ದಿಕ್ಕನ್ನು ಬದಲಾಯಿಸುತ್ತದೆ. ಕಡೆಗೆ ದಲಿತರ ಹೊಲಗೇರಿಯಲ್ಲಿ ಆತ ಮುಕ್ತಿ ಸಿಗುವವರೆಗೂ ಹೋರಾಟ ನಡೆಸಬೇಕಾಗುತ್ತದೆ. ಇದು ದಲಿತಪರ ಕಾಳಜಿಯನ್ನು ಅಭಿವ್ಯಕ್ತ ಪಡಿಸುವ ಪರಿಯಾಗಿದೆ. ರಾಘವಾಂಕನು ತನ್ನ ಪೂರ್ವಿಕರ ಸಂಪ್ರದಾಯವನ್ನು ಸಮರ್ಥವಾಗಿ ರೂಪಿಸಿದ್ದಾನೆ.

ಇಂತಹ ದಲಿತಪರ ಚಿಂತನೆಯ ಪರಂಪರೆ ಒಂದು ಕಡೆ ಇದ್ದರೆ ಮತ್ತೊಂದು ಕಡೆ ಅಸ್ಪೃಶ್ಯತೆಯ ಆಚರಣೆಯ ಕರಾಳ ಮುಖವನ್ನು ಇತಿಹಾಸ ತೆರೆದಿಡುತ್ತದೆ. ಇಂತಹ ಅಮಾನವೀಯ ಆಚರಣೆಯನ್ನು ಮಹಾರಾಷ್ಟ್ರದ ಮರಾಠಿ ಪೇಶ್ವೆಗಳ ಕಾಲದಲ್ಲಿನ ದಲಿತರ ಚಿತ್ರಣವನ್ನು ನೋಡಬಹುದು. ಇವರ ಆಡಳಿತ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ಅಸ್ಪೃಶ್ಯತೆಯ ಆಚರಣೆ ಅತೀ ಎತ್ತರದಲ್ಲಿತ್ತು. ಈ ಹೀನ ಪದ್ದತಿಗೆ ಅದು ಹೆಸರುವಾಸಿಯಾಗಿತ್ತು. ಅಸ್ಪೃಶ್ಯರ ಒಬ್ಬ ಸಾಮಾನ್ಯ ಮನುಷ್ಯ ಊರಿನೊಳಗೆ ಪ್ರವೇಶಿಸಬೇಕಾದರೆ ಅವನು ಈ ಕೆಳಗಿನ ವಸ್ತುಗಳನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋಗಬೇಕಾಗುತಿತ್ತು. ಉಗುಳಲು ಕೊರಳಲ್ಲಿ ಪರಟೆ, ಮುಂಗೈಗೆ ಕಪ್ಪು ಪಟ್ಟಿ, ಕೈಯಲ್ಲಿ ಪೊರಕೆ ಹಿಡಿದುಕೊಂಡು ಹೋಗಬೇಕಾಗುತಿತ್ತು. ಇದು ಅವನ ಅಂದಿನ ದುಃಸ್ಥಿತಿಯನ್ನು ತಿಳಿಸುತ್ತದೆ. ಅಸ್ಪೃಶ್ಯನು ರಸ್ತೆಯಲ್ಲಿ ಉಗುಳಿದನ್ನು ಮೇಲ್ಜಾತಿಯ ಜನರು ತುಳಿದರೆ ಮೈಲಿಗೆಯಾಗುತ್ತದೆ ಎಂಬ ಕಾರಣಕ್ಕಾಗಿ ಆತನು ಕೊರಳ ಪರಟೆಯಲ್ಲಿ ಉಗಿಯಬೇಕಾಗಿತ್ತು. ಅದರಂತೆ ಆತ ತಾನು ನಡೆದ ಹೆಜ್ಜೆಯ ಗುರುತುಗಳನ್ನು ಪೊರಕೆಯಲ್ಲಿ ಅಳಿಸಿ ಹಾಕುತ್ತಾ ಹೋಗಬೇಕು. ಇಂತಹ ಅಮಾನವೀಯ ಆಚರಣೆಗಳನ್ನು ಪೇಶ್ವೆಗಳ ಕಾಲದಲ್ಲಿ ದಲಿತರು ಎದುರಿಸುತ್ತಿದ್ದರು ಎಂಬುದನ್ನು ಇತಿಹಾಸ ತಿಳಿಸುತ್ತದೆ. ಇಂತಹ ಹೀನಪದ್ದತಿಗಳು ಪೇಶ್ವೆಗಳ ಕಾಲದಲ್ಲಷ್ಟೇ ಅಲ್ಲದೇ ಇತರ ಅರಸರುಗಳ ಆಳ್ವಿಕೆಗಳ ಕಾಲದಲ್ಲಿಯೂ ಇಂತಹ ಆಚರಣೆಗಳು ಇದ್ದಿದ್ದನ್ನು ಕಾಣಬುಹುದು. ಇದು ಎಲ್ಲಿಯವರೆಗೆ ನಡೆಯಿತೆಂದರೆ ಬ್ರಿಟಿಷ್ ಆಳ್ವಿಕೆಯ ಬರುವವರೆಗೂ ಈ ಸಂಪ್ರದಾಯ ಹೀಗೆ ನಡೆಯುತಿತ್ತು. ಅಸ್ಪೃಶ್ಯರು ಮೇಲ್ವರ್ಗದವರಿಂದ ನಿರಂತರ ಶೋಷಣೆಗೆ ಗುರಿಯಾಗುತ್ತಿದ್ದರು. ಬ್ರಿಟೀಷರು ಭಾರತದಲ್ಲಿ ತಮ್ಮ ವಸಾಹತುಗಳನ್ನು ಪ್ರಾರಂಭಿಸುವುದಕ್ಕೂ ಮೊದಲು ಬ್ರಾಹ್ಮಣರ ಮತ್ತು ಇತರ ಮೇಲ್ವರ್ಗದವರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿತ್ತು. ಬಹುಸಂಖ್ಯೆಯಲ್ಲಿ ಅಸ್ಪೃಶ್ಯ ಜನಾಂಗವಿತ್ತು. ಆದರೂ ಸಹ ಈ ಜನಾಂಗ ಶೋಷಣೆಗೆ ಗುರುಯಾಗುತ್ತಿದ್ದದು ಆಶ್ಚರ್ಯ. ಇದಕ್ಕೆ ಹಲವಾರು ಕಾರಣಗಳಿವೆ. ಕೇಳಜಾತಿಯ ಜನ ಸಮುದಾಯವನ್ನು ಉತ್ತಮ ಜಾತಿಯವರು ಅಂಧಕಾರದಲ್ಲಿಟ್ಟಿದ್ದರು. ದಲಿತರ ಬಾಳು ಬರಡಾಗಿತ್ತು. ಧರ್ಮದ ಹೆಸರಿನಲ್ಲಿ ಇವರನ್ನು ಬಂಧಿಸಲಾಗಿತ್ತು. ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆ ಮತ್ತು ದೌರ್ಜನ್ಯ ಬಡವರ ಮೇಲೆ ಅತೀಯಾಗಿತ್ತು. ಅಧಿಕಾರದ ಸ್ಥಾನ ಮಾನಗಳು ಅಸಮಾನತೆ ಇದದ್ದರಿಂದ ದಲಿತರು ಆನಾದಿ ಕಾಲದಿಂದಲೂ ಗುಲಾಮರಾಗಿಯೇ ಜೀವಿಸುವ ಅನೀವಾರ್ಯತೆ ಇತ್ತು. ಇದು 'ನಮ್ಮ ಹಣೆ ಬರಹ, ದೈವೆಚ್ಛೇ. ನಮ್ಮ ಪೂರ್ವಜನ್ಮದ ಕರ್ಮ' ಇಷ್ಟೇ ಅವರ ನಂಬಿಕೆಯಾಗಿತ್ತು ಪುರೋಹಿತ ಶಾಹಿ ವ್ಯವಸ್ಥೆ ಇವರ ತಿಳಿವನ್ನು ಇಷ್ಟಕ್ಕೆ ಸೀಮಿತಗೊಳಿಸಿತ್ತು.

ವಸಾಹತುಶಾಹಿಯ ಪ್ರಭಾವದಿಂದ ಭಾರತದ ಹಲವು ಕ್ಷೇತ್ರದಲ್ಲಿ ಗಣನೀಯ ಬದಲಾವಣೆಗಳಾದವು. ಅದು ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಇದರ ಪ್ರಭಾವವನ್ನು ಗುರುತಿಸಬಹುದು. ೧೭೫೭ರಲ್ಲಿ ಬ್ರಿಟಿಷರು ಪ್ಲಾಸೀ ಕದನದಲ್ಲಿ ಜಯಗಳಿಸಿದರು. ಈ ಕದನ ಬ್ರಿಟಿಷರಿಗೆ ಅತ್ಯಂತ ಮುಖ್ಯವಾದುದಾಗಿದೆ. ಈ ಕದನದ ಜಯದಿಂದ ಇವರು ಮೊದಲಿಗೆ ಬಂಗಾಳದಲ್ಲಿ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು. ಬ್ರಿಟಿಷ್ ಸರ್ಕಾರ

'ಈಸ್ಟ್ ಇಂಡಿಯಾ ಕಂಪನಿ' ಯ ಮೂಲಕ ತಮ್ಮ ವಸಾಹತುಶಾಹಿಯನ್ನು ಪ್ರಾರಂಭಿಸಿದರು. ಇದರ ಪರಿಣಾಮದಿಂದ ೧೮೩೫ ರಲ್ಲಿ ಮೆಕಾಲೆ ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಪ್ರಾರಂಭಿಸಿದನು. ಇದರ ಉದ್ದೇಶ ಭಾರತದ ಜನರ ಜನಜೀವನ ಪದ್ಧತಿಯಲ್ಲಿ

ಬದಲಾವಣೆಯನ್ನು ತರುವುದಾಗಿತ್ತು. ಹಾಗೂ ಬ್ರಿಟಿಷ್ ಸ್ವಾಭಿಮಾನದ ಪ್ರಶ್ನೆಯೂ ಸಹ ಆಗಿತ್ತು. ಇಂಗ್ಲಿಷ್ ಶಿಕ್ಷಣ ಪದ್ಧತಿಯಿಂದ ಭಾರತದ ಅನೇಕ ಗಣ್ಯರು ಈ ವಿದ್ಯಾಭ್ಯಾಸದ ಪರಿಚಯದಿಂದ ಹೊರದೇಶಗಳಲ್ಲಿ ವಿದ್ಯಾಭ್ಯಾಸ ಸೌಲಭ್ಯ ಪಡೆಯುವಂತಾಯಿತು. ಇದರಿಂದ ಭಾರತ ದೇಶದ ಸಂಕಷ್ಟಗಳಷ್ಟೇ ಅಲ್ಲದೆ ಭಾರತದ ಹೊರಗಿನ ದೇಶಗಳಲ್ಲಿನ ಪರಿಸ್ಥಿತಿಗಳನ್ನು ಅಧ್ಯಯನ ನಡೆಸಲು ಹಲವು ಮುಖಂಡರಿಗೆ ಸಾಧ್ಯವಾಯಿತು. ಮಹಾತ್ಮ ಗಾಂಧಿಜೀ, ಅಂಬೇಡ್ಕರ್ ಮುಂತಾದ ಸಮಾಜ ಸುಧಾರಕರು ಬೇರೆ ದೇಶಗಳ ಜೊತೆ ಭಾರತವನ್ನು ಹೋಲಿಸಲು ಇಂಗ್ಲಿಷ್ ಶಿಕ್ಷಣವ್ಯವಸ್ಥೆ ಅರಿವನ್ನು ಮೂಡಿಸಿತು. ಗಾಂಧೀಜಿಯವರು ದಕ್ಷಿಣ ಆಫ್ರಿಕಾದ ಜನಗಳ ಸಮಾನತೆಗಾಗಿ ಹೋರಾಟ ನಡೆಸಲು ಹಾಗೆಯೇ ಭಾರತದ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳುವಳಿ ನಡೆಸಲು ಈ ಶಿಕ್ಷಣದಿಂದ ದೊರೆತ ಜ್ಞಾನವೆ ಪ್ರಮುಖವಾದುದು. ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯಿಂದ ವಿವೇಕವನ್ನು ಪಡೆದ ಭಾರತೀಯ ಚಿಂತಕರು ಭಾರತದಲ್ಲಿಯೇ ಇದ್ದ ಮೂಡನಂಬಿಕೆಗಳು, ಧಾರ್ಮಿಕ, ರಾಜಕೀಯ ಹಾಗೂ ಶಿಕ್ಷಣ ಕ್ಷೇತ್ರದಲ್ಲಿನ ಅನೇಕ ಸಂಕುಚಿತ ಭಾವನೆಗಳ ವಿರುದ್ಧ ಹೋರಾಟ ನಡೆಸಲು ಪ್ರಾರಂಭಿಸಿದರು. ಭಾರತದ ಅನಿಷ್ಟ ಪದ್ಧತಿಗಳಾದ, ಜಾತಿ ಪದ್ಧತಿ, ಸತಿ ಸಹಗಮನ, ಬಾಲ್ಯವಿವಾಹ, ಮುಂತಾದ ಅನಿಷ್ಟ ಪದ್ಧತಿಗಳ ವಿರುದ್ಧ ಜಾಗೃತರಾದರು. ಇಲ್ಲಿಯವರೆಗಿನ ಶ್ರೀಸಾಮಾನ್ಯನ ಬದುಕು ಅನೇಕ ಸಮಸ್ಯೆಗಳಿಗೆ ಗುರಿಯಾಗಿತ್ತು. ಬ್ರಿಟಿಷರ ಆಗಮನದಿಂದ ಹೊಸ ಎಚ್ಚರ ಇವರ ವಿದ್ಯಾಭ್ಯಾಸದಿಂದ ಭಾರತೀಯರಲ್ಲಿ ಉಂಟಾಯಿತು. ಈ ಕಾರಣದಿಂದಾಗಿ ಅನೇಕ ಸಮಾಜ ಸುಧಾರಣಾವಾದಿಗಳಲ್ಲಿ ಪ್ರಮುಖರಾದ ಮಹಾತ್ಮ ಗಾಂಧೀಜಿ, ರಾಜರಾಮಮೋಹನ್ ರಾಯ್, ಅಂಬೇಡ್ಕರ್ ಮುಂತಾದವರು ಸಮಾಜದ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಟ ನಡೆಸಲು ಪ್ರಾರಂಭಿಸಿದರು. ಶ್ರೀಸಾಮಾನ್ಯನ ಉದ್ಧಾರಕ್ಕಾಗಿ ಆತ ಶಿಕ್ಷಣ ಪಡೆಯುವುದು ಬಹಳ ಮುಖ್ಯ ಎಂಬ ಅಂಶವನ್ನು ಮೇಲಿನ ಎಲ್ಲಾ ಚಿಂತಕರು ಬಹಳ ಬೇಗ ಮನಗಂಡರು. ವಿದ್ಯಾಭ್ಯಾಸದಿಂದ ಸಮಾಜದಲ್ಲಿನ ಅಂಧಕಾರ, ಮೂಢನಂಬಿಕೆ, ಜಾತಿಸಮಸ್ಯೆ ಮತ್ತು ಅನೇಕ ದುಶ್ಚಟಗಳನ್ನು ದೂರ ಮಾಡಬಹುದು ಎಂಬುದನ್ನು ತಿಳಿದುಕೊಂಡರು.

ಅಸ್ಪೃಶ್ಯತೆಯ ನಿವಾರಣೆಗಾಗಿ ಮಹಾತ್ಮ ಗಾಂಧೀಜಿ ಹಾಗೂ ಅಂಬೇಡ್ಕರ್ ಅವರು ಅದರದೇ ಆದ ತತ್ವಗಳ ಆಧಾರದ ಮೇಲೆ ಹೋರಾಡಿದ್ದಾರೆ. ಅವರಂತೆ ಆಧುನಿಕ ಸಂದರ್ಭದಲ್ಲಿ ಅಸ್ಪೃಶ್ಯತೆಯ ವಿರುದ್ಧ ಜ್ಯೋತಿಬಾಪುಲೆ, ಛತ್ರಪತಿ ಶಾಹುಮಹಾರಾಜ್, ಸಯ್ಯಜಿರಾವ್ ಗಾಯಕವಾಡ್, ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ಪೆರಿಯಾರ್ ರವರು ಪ್ರಮುಖರು. ಇವರಿಗೆ ಬುದ್ಧ, ಬಸವಣ್ಣನವರ ಸಾಮಾಜಿಕ ಚಿಂತನೆಯ ಅಂಶಗಳು ಪ್ರಮುಖ ಪ್ರೇರಣೆಗಳಾಗಿದ್ದವು. ಮಹಾತ್ಮ ಗಾಂಧೀಜಿ ಹಾಗೂ ಅಂಬೇಡ್ಕರ್ ಅವರ ಅಸ್ಪೃಶ್ಯತೆಯನ್ನು ನಿವಾರಿಸುವ ವಿಚಾರದಲ್ಲಿ ಇಬ್ಬರ ನಡುವೆ ಹಲವು ಭಿನ್ನಾಭಿಪ್ರಾಯಗಳಿದ್ದವು. ಒಂದು ಗುಂಪು ಧರ್ಮ ಮತ್ತು ರಾಜಕಾರಣ ಒಂದೇ ಎಂದು ಪ್ರತಿಪಾದಿಸಿದರೆ ಮತ್ತೊಂದು ಗುಂಪು ಧರ್ಮ ಮತ್ತು ರಾಜಕಾರಣ ಬೇರೆ ಬೇರೆ ಘಟಕಗಳು ಎಂದು ವಾದಿಸುತ್ತಿದ್ದವು. ಮೊದಲನೇ ಗುಂಪಿನಲ್ಲಿ ಅರವಿಂದರು, ಬಾಲಗಂಗಾಧರ ತಿಲಕ್, ಮಹಾತ್ಮ ಗಾಂಧೀಜಿಯವರಿದ್ದರೆ ಎರಡನೆ ಗುಂಪಿನಲ್ಲಿ ಅಂಬೇಡ್ಕರ್ ಹಾಗೂ ಜವಾಹರಲಾಲ್ ನೆಹರೂರವರು ಪ್ರಮುಖರಾಗಿದ್ದರು. ಅಂಬೇಡ್ಕರ್‌ರವರು ಪ್ರಮುಖವಾಗಿ ಎರಡು ವಸಾಹತು ಶಾಹಿಯ

ವಿರೋಧಿಗಳಾಗಿದ್ದರು. ಒಂದು ಬ್ರಿಟಿಷ್ ವಸಾಹತುಶಾಹಿ ಮತ್ತೊಂದು ವೈದಿಕ ವಸಾಹತುಶಾಹಿಯ ಧೊರಣೆಗಳ ಬಗ್ಗೆ ಅಸಮಾಧಾನ ಹೊಂದಿದ್ದರು. ಬ್ರಿಟಿಷ್ ವಸಾಹತುಶಾಹಿಯು ಪ್ರಾರಂಭದಲ್ಲಿ ದಲಿತ ಸಮಸ್ಯೆಗಳ ಬಗ್ಗೆ ಸುಧಾರಣಾ ನೆಲೆಯಲ್ಲಿ ಚಿಂತಿಸಲಿಲ್ಲವೆಂಬುದು ಒಂದು ಕಾರಣವಾದರೆ ಮತ್ತೊಂದು ಇದು ದೇಶದ ಸಂಪತ್ತುಗಳನ್ನು ಲೂಟಿ ಮಾಡುತ್ತದೆ ಎಂಬುದು ಅಂಬೇಡ್ಕರ್‌ರವರ ವಾದವಾಗಿತ್ತು. ವೈದಿಕ ಬ್ರಾಹ್ಮಣ ಶಾಹಿಯ ಉದ್ದೇಶ ಸಮಾಜದ ಅಂಚಿನಲ್ಲಿರುವ ಸಮುದಾಯಗಳನ್ನು ಶೋಷಿತ ದಲಿತ ವರ್ಗಗಳನ್ನು ಅವು ಹೇಗಿವೆಯೋ ಹಾಗೆಯೇ ಉಳಿಸುವ ಆಶಯವನ್ನು ಹೊಂದಿವೆ ಎಂಬ ನಂಬಿಕೆಯನ್ನು ಹೊಂದಿದ್ದರು. ಬ್ರಿಟಿಷರು ಪ್ರಾರಂಭದಲ್ಲಿ ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಕ್ರಮ ತೆಗೆದುಕೊಳ್ಳಲಿಲ್ಲ ಎಂಬ ವಿಚಾರದ ಬಗ್ಗೆ ಅಂಬೇಡ್ಕರ್ ಅವರಿಗೆ ಅಸಮಾಧನವಿತ್ತು. ಅಸ್ಪೃಶ್ಯರನ್ನು ಹಿಂದೂ ಧರ್ಮದ ಭಾಗವೆಂದೆ ವಸಾಹತುಶಾಹಿ ತಿಳಿದಿತ್ತು. ಹಾಗೆಯೇ ಅಸ್ಪೃಶ್ಯರು ಹಿಂದೂ ಧರ್ಮದ ಭಾಗವಾಗಿಯೆ ಮುಂದುವರೆಯ ಬೇಕು ಎಂಬ ಧೋರಣೆಯನ್ನು ಹೊಂದಿತ್ತು. ವೈದಿಕ ಬ್ರಾಹ್ಮಣ ಶಾಹಿಯು ಸಹ ಇದೇ ಅಂಶವನ್ನು ಪ್ರತಿಪಾದಿಸುತ್ತಿತ್ತು. ಇದರ ಅರ್ಥ ಅಸ್ಪೃಶ್ಯರು ಅಸ್ಪೃಶ್ಯರಾಗೆ ಮುಂದುವರೆಯಬೇಕು. ಅವರಿಗೆ ಈ ಸಾಮಾಜಿಕ ಬಂಧನದಿಂದ ಬಿಡುಗಡೆಯನ್ನು ಎರಡು ವಸಾಹತುಶಾಹಿಗಳು ನಿರಾಕರಿಸುವಂತಹ ಧೋರಣೆಗಳನ್ನು ಹೊಂದಿದ್ದವು. ಈ ಧೋರಣೆಗಳನ್ನು ನಿರಾಕರಿಸುವ ಹಾಗೂ ಆದನ್ನು ಸಮರ್ಥಿಸುವ ಅನೇಕ ವಿಚಾರವಾದಿಗಳ ಗುಂಪು ಅಂದಿನ ಸಂದರ್ಭದಲ್ಲಿ ನಿರ್ಮಾಣವಾಗಿತ್ತು. ಇದು ಬ್ರಿಟೀಷರ ವಸಾಹತುಶಾಹಿಯ ಪಕ್ರಿಯೆಯಿಂದ ಭಾರತದ ಸಂದರ್ಭದಲ್ಲಿ ಎದುರಾದ ಸಾಮಾಜಿಕ ಸಂಘರ್ಷವಾಗಿದೆ.

ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧಿತಿಯಿಂದ ಹೊಸ ರಾಜಕೀಯ ಚಿಂತನೆಗಳು ಭಾರತೀಯ ಸಂದರ್ಭದಲ್ಲಿ ಹುಟ್ಟಿಕೊಂಡವು. ಈ ಚಿಂತನೆಗಳು ಸಾಮಾಜಿಕ ಕ್ಷೇತ್ರದಲ್ಲಿನ ಅದುವರೆಗಿನ ಆಚರಣೆ ಸಂಪ್ರದಾಯಗಳನ್ನು ವಿರೋಧಿಸುವ, ಸಮರ್ಥಿಸುವ ಎಚ್ಚರವನ್ನು ಪಡೆಯುವಂತೆ ಚಿಂತಕರರನ್ನು ಪ್ರೇರೆಪಿಸಿತು. ಈ ಚಿಂತನೆಗಳು ಕೇವಲ ರಾಜಕೀಯ ಕ್ಷೇತ್ರಕ್ಕಷ್ಟೇ ಸೀಮಿತವಾಗದೆ ಸಾಹಿತ್ಯ ಕ್ಷೇತ್ರದಲ್ಲಿನ ಹೊಸ ಹೋಸ ಸಾಹಿತ್ಯ ಪ್ರಕಾರಗಳ ಉಗಮಕ್ಕೆ ಹಾಗೆಯೇ ಹೊಸ ಸಾಹಿತ್ಯ ಪಂಥಗಳ ಸೃಷ್ಟಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಪದ್ದತಿ ಕಾರಣವಾಯಿತು. ಒಂದು ಸಾಹಿತ್ಯ ಪರಂಪರೆ ತನ್ನ ಕಾಲದ ಸಾಮಾಜಿಕ ರಾಜಕೀಯ ಹಾಗೂ ಸಾಂಸ್ಕೃತಿಕ ಸನ್ನಿವೇಶಗಳಿಂದ ಪ್ರಭಾವಿತವಾಗುವುದನ್ನು ಸಾಹಿತ್ಯ ಚರಿತ್ರೆಯಿಂದ ತಿಳಿಯಬಹುದು. ವರ್ತಮಾನದ ಅಗತ್ಯಗಳು ಒಂದು ಸಾಹಿತ್ಯ ಪರಂಪರೆಯ ನಿರ್ಮಾಣಕ್ಕೆ ಕಾರಣವಾಗುತ್ತದೆ.

ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಅಲ್ಲಿ ಹಲವು ಪರಂಪರೆಗಳು ಹಾಗೆಯೇ ಸಾಹಿತ್ಯ ಪಂಥಗಳನ್ನು ಕಾಣಬಹುದು. ಪ್ರತಿಯೊಂದು ಸಾಹಿತ್ಯ ಪಂಥವು ನಿರ್ದಿಷ್ಟ ತತ್ವ ಹಾಗೂ ಸಿದ್ದಾಂತಗಳನ್ನು ಒಳಗೊಂಡಿರುತ್ತದೆ. ಇಂಗ್ಲೀಷ್ ಸಾಹಿತ್ಯದ ರೋಮ್ಯಾಂಟಿಸಿಸಂ (Romanticism) ಪಂಥವು ತನ್ನದೇ ಆದ ತತ್ವ, ಸಿದ್ಧಾಂತಗಳನ್ನು ಒಳಗೊಂಡಿತ್ತು. ಇದು ಒಂದು ನಿರ್ದಿಷ್ಟ ಕಾವ್ಯ ಚಳುವಳಿಯಾಗಿ ಪಾಶ್ಯಾತ್ಯರಲ್ಲಿ ಬಳಕೆಯಲ್ಲಿತ್ತು. ಒಂದು ಮನೋಧರ್ಮದ ಸೂಚಕವಾಗಿಯೂ ಈ ಪಂಥ ಚಲಾವಣೆಯಲ್ಲಿ ಇತ್ತು. ಈ ಸಾಹಿತ್ಯ ಪಂಥದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ನವೋದಯ ಎಂಬ ಪಂಥ ಉಗಮವಾಯಿತು.

೧೭೭೮ ರಿಂದ ೧೮೩೨ ರ ಅವಧಿಯಲ್ಲಿ ರಚಿತವಾದ ಸಾಹಿತ್ಯವನ್ನು ಪಾಶ್ಚಾತ್ಯರು (Romanticism) 'ರಮ್ಯ' ಎಂದು ಕರೆಯುತ್ತಾರೆ. ಈ ಪಂಥದ ವ್ಯಾಪ್ತಿ ಎಷ್ಟಿದೆ ಎಂದರೆ, ಈ ಸಾಹಿತ್ಯ ಪಂಥವು ಜಗತ್ತಿನ ಎಲ್ಲಾ ಭಾಷೆಗಳ ಮೇಲು ತನ್ನ ಪ್ರಭಾವವನ್ನು ಬೀರಿದೆ. ಜಗತ್ತಿನ ಎಲ್ಲಾ ಭಾಷೆಗಳಲ್ಲಿನ ಕಲೆಗಳಲ್ಲಿ ಈ ಪಂಥದ ಪ್ರಭಾವವನ್ನು

ಗುರುತಿಸಬಹುದಾಗಿದೆ. ಕನ್ನಡದ ಸಂದರ್ಭದಲ್ಲಿ ಈ ಪಂಥದ ಪ್ರಭಾವನ್ನು ಸ್ವಾತಂತ್ರ್ಯ ಪೂರ್ವ ಕವಿಗಳಲ್ಲಿ ಗುರುತಿಸಬಹುದು. ಇದು ಕನ್ನಡದ ಸಂದರ್ಭದಲ್ಲಿ 'ನವೋದಯ'ಎಂಬ ಪಂಥದ ಉಗಮಕ್ಕೆ ಕಾರಣವಾಯಿತು.

ನವೋದಯ ಎಂದರೆ 'ಹೊಸ ಉದಯ' ಎಂಬ ಅರ್ಥವಿದೆ. ಕನ್ನಡದ ಲೇಖಕರು ಇಂಗ್ಲಿಷ್ ಸಾಹಿತ್ಯ ಪ್ರೇರಣೆಯಿಂದ ಹೊಸ ಹೊಸ ಚಿಂತನೆಗಳಿಗೆ ತಮ್ಮನ್ನು ತೊಡಗಿಸಿಕೊಂಡರು. ಈ ಹೊಸ ಜ್ಞಾನದಿಂದ ಅವರಲ್ಲಿ ಹೊಸಪ್ರಜ್ಞೆಗೆ ಕಾರಣವಾಯಿತು. ಹೊಸ ವಿಚಾರಗಳ ಬಗ್ಗೆ ಜ್ಞಾನೊದಯವಾಯಿತು.

ನವೋದಯ ಸಾಹಿತ್ಯದ ಪ್ರಮುಖ ಲಕ್ಷಣಗಳೆಂದರೆ ಒಂದು ವಿಚಾರವನ್ನು ಅಥವಾ ವಸ್ತುವನ್ನು ವಾಸ್ತವಿಕತೆಯ ಅರಿವಿಗಿಂತ ಭಿನ್ನವಾದ ನೆಲೆಯಲ್ಲಿ ಅದನ್ನು ಗುರುತಿಸುವುದಾಗಿದೆ. ಇದನ್ನು ವಿಮರ್ಶಕರು ಚಿಂತನೆಗೆ ವಿರುದ್ಧವಾದ ಭಾವನೆಗಳನ್ನು ಹೊಂದಿರುವ ಚಿಂತಕರ ಗುಂಪು ಎಂದು ಕರೆಯಲಾಗಿದೆ. ಕವಿ ತನ್ನ ಸುತ್ತಲ ಜಗತ್ತನ್ನು ತನ್ನ ವಿಚಾರದ ಬೆಳಕಿನಲ್ಲಿ ಕಂಡು ಹಾಗೆ ಕಂಡಿದ್ದನ್ನು ಸ್ಪಷ್ಟವಾಗಿ ಗಂಭೀರ ಹಾಗೂ ಸುಂದರವಾಗಿ ಚಿತ್ರಿಸುವುದು ನವೋದಯ ಕವಿಗಳ ಲಕ್ಷಣಗಳಾಗಿವೆ. ೨೦ನೇ ಶತಮಾನದ ಆದಿಯ ಕನ್ನಡ ಸಾಹಿತ್ಯ ಈ ಮೇಲಿನ ಗುಣಗಳನ್ನು ಹೊಂದಿತ್ತು. ಇಂತಹ ಸಾಹಿತ್ಯ ಪಂಥವನ್ನು ವಿದ್ವಾಂಸರು 'Return to the Native' ಎಂದು ಕರೆದಿದ್ದಾರೆ. ಬದುಕಿಗೆ ಆನಂದವನ್ನು ಅಮಿತ ಉತ್ಸಾಹವನ್ನು ತುಂಬುವುದು ಈ ಸಾಹಿತ್ಯದ ಗುಣ. ಈ ಸಾಹಿತ್ಯ ಪಂಥದ ಕಾವ್ಯದ ಗುಣಕ್ಕೆ ನಮ್ಮ ನವೋದಯ ಕವಿಗಳು ಮಾರು ಹೋದರು ಕುವೆಂಪು, ಮಾಸ್ತಿ, ಬೇಂದ್ರೆ, ಕಣವಿ ಮುಂತಾದ ಹಲವು ಕವಿಗಳು ಈ ಪಂಥದ ಪ್ರಭಾವಕ್ಕೆ ಒಳಗಾದರು. ಇಂಗ್ಲಿಷ್‌ನ 'ರೋಮ್ಯಾಂಟಿಸಿಸಂ' ಕನ್ನಡದ ನವೋದಯ ಕಾವ್ಯಗಳೇರಡರಲ್ಲೂ ಸಾಮ್ಯಗಳಿರುವುದನ್ನು ಕಾಣಬಹುದಾಗಿದೆ. ದೇವರ ಆರಾಧನೆಯ ದೃಷ್ಟಿ ಪರಿವರ್ತನೆಗೊಂಡು ಈ ಸಂದರ್ಭದಲ್ಲಿ ನಿಸರ್ಗದ ಆರಾಧನೆಗೆ ಹೆಚ್ಚು ಮಹತ್ವ ಸಿಕ್ಕಿತು. ಭಾಷೆ ಮತ್ತು ವಸ್ತುಗಳ ಬಳಕೆಯಲ್ಲಿ ಸಾಕಷ್ಟು ಬದಲಾವಣೆಗಳುಂಟಾದವು. ಕನ್ನಡ ಕವಿತೆಗಳ ಬೆಳವಣಿಗೆಗೆ ಇಂಗ್ಲೀಷ್ ಕವಿತೆಗಳೇ ಮುಖ್ಯ ಪ್ರೇರಣೆಯಾದುವು. ಈ ಕಾರಣಕ್ಕಾಗಿ ಕನ್ನಡದಲ್ಲಿ ಬಿ. ಎಂ. ಶ್ರೀಕಂಠಯ್ಯನವರು 'ಇಂಗ್ಲೀಷ್ ಗೀತೆಗಳು' ಎಂಬ ಅನುವಾದಿತ ಕವನ ಸಂಕಲನ ಪ್ರಕಟವಾಗಿದ್ದು. ಮೇಲಿನ ಮಾತಿಗೆ ಪುಷ್ಟಿ ನೀಡುವಂತೆ ನಿಸರ್ಗ ಪ್ರೇಮ ಈ ಪಂಥದ ಕವಿಗಳ ಮುಖ್ಯ ಅಭಿವ್ಯಕ್ತಿಯಾಯಿತು. ಅದರಂತೆ ಆತ್ಮನಿಷ್ಠತೆ, ದೇಶಾಭಿಮಾನ ಮತ್ತು ಪ್ರಕೃತಿ ಆರಾಧನೆ ಈ ಪಂಥದ ಲೇಖಕರ ಪ್ರಮುಖ ಆಶಯಗಳಾದವು. ಈ ಪಂಥದವರು ಕಾವ್ಯದ ಜೊತೆಗೆ ಕಥನ ಕವನ, ಖಂಡಕಾವ್ಯ ಶೋಕಗೀತೆ ಮುಂತಾದ ಕಾವ್ಯ ಪ್ರಕಾರಗಳಲ್ಲಿಯು ತಮ್ಮ ಅಭಿವ್ಯಕ್ತಿಯನ್ನು ವ್ಯಕ್ತ ಪಡಿಸಿದರು.

ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿಯು ಅಲ್ಲಿನ ಸಾಂಸ್ಕೃತಿಕ ಚರಿತ್ರೆಯ ಗತಿಯನ್ನು ಬದಲಾಯಿಸಿದಂತೆ ಭಾರತದಲ್ಲಿ ಪಾಶ್ಚಾತ್ಯ ವಿದ್ಯಾಭ್ಯಾಸ ಪದ್ಧತಿಯು ಇಲ್ಲಿನ ಸಾಂಸ್ಕೃತಿಕ ಪರಿಸರವನ್ನು ಪರಿಣಾಮಕಾರಿಯಾಗಿ ಬದಲಾಯಿಸಿತು. ಈ ವಿದ್ಯಾಭ್ಯಾಸ ಪದ್ದತಿಯು ಭಾರತದ ಮಧ್ಯಮ ವರ್ಗದ ಜನರಲ್ಲಿ ಒಂದು ಹೊಸ ಜಾಗೃತಿಯನ್ನು ಉಂಟು ಮಾಡಿತು. ನವೋದಯ ಸಂದರ್ಭದ ಲೇಖಕರು ಈ ಪರಿವರ್ತನೆಯ ಕಾಲವನ್ನು ವರ್ತಮಾನದ ತುರ್ತುಗಳ ಪರಿಹಾರಕ್ಕಾಗಿ ಉಪಯೋಗಿಸಿಕೊಂಡರು. ಅಲ್ಲಿಯವರೆಗೂ ತಮ್ಮ ಅಭಿವ್ಯಕ್ತಿಯನ್ನು ಕಾವ್ಯಗಳಿಗಷ್ಟೇ ಸೀಮಿತಗೊಳಿಸಿಕೊಂಡಿದ್ದ ಲೇಖಕರು ಸಾಹಿತ್ಯದ ಇತರ ಪ್ರಕಾರಗಳಾದ ಕಥೆ, ಕಾದಂಬರಿ, ಪ್ರಬಂಧ ಮುಂತಾದ ಸಾಹಿತ್ಯ ಪ್ರಭೇದಗಳ ಮೂಲಕ ತಮ್ಮ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಲು ಪ್ರಾರಂಭಿಸಿದರು. ಈ ಪ್ರಕಾರಗಳಿಂದ ಪ್ರಭುತ್ವಗಳಿಗೆ ತಮ್ಮ ಪ್ರತಿರೋಧವನ್ನು

ಒಡ್ಡಲು ಪ್ರಾರಂಭಿಸಿದರು. ಆರಂಭದ ಕಾದಂಬರಿಗಳು ಭಾರತದ ಸಮಾಜದಲ್ಲಿನ ಅಸಮಾನತೆಯ ಬಗ್ಗೆ ವಿರೋಧವನ್ನು ವ್ಯಕ್ತಪಡಿಸಿದವು. ನಂತರ ಪಾಶ್ಚತ್ಯಮಾದರಿಗಳಿಗೆ ಕಾದಂಬರಿಗಳು ಒಗ್ಗಿಕೊಂಡವು. ಈ ರೀತಿಯ ಕಾದಂಬರಿಗಳು ಭಾರತೀಯ ಸಂದರ್ಭದಲ್ಲಿ ಬಂಗಾಳಿ, ಮರಾಠಿ, ಗುಜರಾತಿ, ಹಿಂದಿ ಮತ್ತು ಕನ್ನಡ ಭಾಷೆಗಳಲ್ಲಿ ಮೊದಲು ಕಾಣಿಸಿಕೊಂಡವು. ಕನ್ನಡದ ಇಂದಿರಾ ಬಾಯಿ ಇಂತಹ ಆರಂಭದ ಕಾದಂಬರಿಗಳಲ್ಲಿ ಒಂದು. ಇವು ವಿಧವಾವಿವಾಹ, ವೇಶ್ಯಾ ಜೀವನ, ಜಮೀನ್ದಾರಿ ವ್ಯವಸ್ಥೆಯ ಕ್ರೂರ ಆಚರಣೆಗಳ ಬಗ್ಗೆ ವಸ್ತುವನ್ನು ಹೊಂದಿದ್ದವು.

ಕನ್ನಡದ ಸಂದರ್ಭದಲ್ಲಿ ನವೋದಯ ಲೇಖಕರಿಂದ ಕಾದಂಬರಿ ಪ್ರಕಾರ ಬೆಳಕಿಗೆ ಬಂದಿತು. ಅನುವಾದದ ರೂಪದಲ್ಲಿ ಗುಲ್ವಾಡಿ ವೆಂಕಟರಾಯರಿಂದ ಆರಂಭವಾದ ಈ ಪ್ರಕಾರ ಗಳನಾಥ ಕೆರೂರ ವಾಸುದೇವಾಚಾರ್ ಎಂ. ಎಸ್. ಪುಟ್ಟಣ್ಣ, ಕುವೆಂಪು ಕಾರಂತರವರೆಗೂ ಮುಂದುವರೆದಿದೆ. ಮುಂದೆ ಪ್ರಗತಿಶೀಲ ಸಾಹಿತ್ಯ ಪ್ರಾರಂಭವಾಗುವವರೆಗೂ ಈ ಪಂಥ ಮುಂದುವರೆಯಿತು. ಇಲ್ಲಿನ ಲೇಖಕರು 'ರೋಮ್ಯಾಂಟಿಸಿಸಂ' ಮತ್ತು 'ರಿಯಲಿಸಂ' (ನವೋದಯ ಮತ್ತು ವಾಸ್ತವವಾದ) ಈ ಎರಡು ಸಾಹಿತ್ಯ ಪಂಥಗಳಿಂದ ಪ್ರಭಾವಿತರಾಗಿದ್ದರು. ಸಾಧ್ಯವಾದಷ್ಟು ಪ್ರಾಮಾಣಿಕವಾಗಿ ಬದುಕಿನ ಮತ್ತು ಪ್ರಕೃತಿಯ ಎಲ್ಲಾ ಮುಖಗಳನ್ನು ಚಿತ್ರಿಸುವ ಪುನರ್‌ಸೃಷ್ಟಿಸುವ ಪ್ರಯತ್ನವನ್ನು ಈ ಕಾಲದ ಕಾದಂಬರಿಕಾರರು ಮಾಡಿದರು. ಈ ಪ್ರಕ್ರಿಯೆಯನ್ನು ಕುವೆಂಪುರವರ ಸಮಗ್ರ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಇವರ ಎರಡು ಕಾದಂಬರಿಗಳು ಈ ನಿಟ್ಟಿನಲ್ಲಿ ಸಾರ್ಥಕಗೊಂಡಿದೆ.

ಕುವೆಂಪು ಮತ್ತು ಶಿವರಾಮ ಕಾರಂತರು ನವೋದಯ ಸಂದರ್ಭದ ಸಮಕಾಲೀನ ಸಮಸ್ಯೆಗಳ ಬಗ್ಗೆ ವಿವೇಕವುಗಳ್ಳಾವರಾಗಿದ್ದರು. ಈ ಕಾರಣದಿಂದ ಅವರ ಸಾಹಿತ್ಯ ಕೃತಿಗಳಲ್ಲಿ ಅಂದಿನ ಸಂದರ್ಭದ ಸ್ವಾತಂತ್ರ್ಯ ಹೋರಾಟದ ಚಿತ್ರಣಗಳು, ವಸಾಹತುಶಾಹಿಯ ಸಮಸ್ಯೆಗಳು, ಅಸ್ಪೃಶ್ಯತೆಯ ಸಮಸ್ಯೆ, ಉಳಿಗಮಾನ್ಯಪದ್ಧತಿಯ ಅಪಾಯಗಳು ಇವೆ ಮುಂತಾದ ಸಮಸ್ಯೆಗಳು ಗಾಂಧೀಜಿಯ ವಿಚಾರಗಳಿಂದ ಪ್ರೇರಣೆ ಪಡೆದು ತಮ್ಮ ಕೃತಿಗಳಲ್ಲಿ ದಾಖಲಾಗಿವೆ. ಇವರಿಗೆ ಗಾಂಧೀಜಿಯ ಚಿಂತನೆಯ ಪ್ರೇರಣೆಯ ಜೊತೆಗೆ ಪಾಶ್ಚತ್ಯರ ವಾಸ್ತವವಾದವು ಕೂಡ ಇವರ ಸೃಜನಶೀಲ ಪ್ರಕ್ರಿಯೆಗಳಿಗೆ ಉತ್ತೇಜನವನ್ನು ನೀಡಿದೆ. ಸಾಹಿತಿಯಾದವನು ಕೇವಲ ಮಹತ್ವದ ಘಟನೆಗಳನ್ನು ದಾಖಲಿಸುವುದಕ್ಕಿಂತ ಕ್ರಿಯಶೀಲವಾಗಿ ಕೃತಿಯ ಮೂಲಕ ಅಂದಿನ ಸಮಸ್ಯೆಗಳನ್ನು, ಘಟನೆಗಳನ್ನು ಮೌಲ್ಯಮಾಪನ ಮಾಡಬೇಕಾಗುತ್ತದೆ. ಆದ್ದರಿಂದ ವಾಸ್ತವದ ಚಳುವಳಿಗಳಲ್ಲಿ ಸಹ್ಯವಾದ ಅಥವಾ ಅಸಹನೀಯವಾದ ಬದುಕಿನ ಎಲ್ಲಾ ಘಟನೆಗಳನ್ನು, ಸಮಸ್ಯೆಗಳನ್ನು ಪ್ರಾದೇಶಿಕ ವೈವಿಧ್ಯಗಳನ್ನು ಸಮಕಾಲೀನ ಸಂಪ್ರದಾಯದ ರೀತಿ-ರಿವಾಜುಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಮೇಲಿನ ಇಬ್ಬರೂ ಲೇಖಕರು ಸಮರ್ಥವಾಗಿ ವಿವರಿಸಿದ್ದಾರೆ.

ಇವರು ತಮ್ಮ ಕಾದಂಬರಿಗಳಲ್ಲಿ ಅಂದಿನ ಸಂದರ್ಭದ ಪ್ರಮುಖ ಸಮಸ್ಯೆಯಾದ ಅಸ್ಪೃಶ್ಯತೆಯ ಸಮಸ್ಯೆಯನ್ನು ಚಿತ್ರಿಸಿದ್ದಾರೆ. ಇದಕ್ಕೆ ಇವರಿಗೆ ಗಾಂಧೀಜಿಯವರು ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಚಿಂತಿಸಿದ ವಿಷಯವು ಪ್ರಮುಖವಾದ ಪ್ರೇರಣೆಯಾಗಿದೆ. ಅದೇ ರೀತಿ ಪಾಶ್ಚಾತ್ಯ ವಿದ್ಯಾಭ್ಯಾಸ ಪದ್ಧತಿಯಿಂದ ಇವರು ಪಡೆದುಕೊಂಡ ವೈಚಾರಿಕ ಚಿಂತನೆಯು ಸಹ ನವೋದಯದ ಲೇಖಕರು ದಲಿತರ ಸಮಸ್ಯೆಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ದಾಖಲಿಸಿರುವುದಕ್ಕೆ ಕಾರಣವಾಗಿದೆ. ಈ ವಿಚಾರವನ್ನು ಅಂದಿನ ನವೋದಯದ ಅನೇಕ ಲೇಖಕರು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಶಿವರಾಮ ಕಾರಂತರು ತಮ್ಮ 'ಚೋಮನ ದುಡಿ' ಹಾಗೂ 'ಕುಡಿಯರ ಕೂಸು' ಎಂಬ ಕಾದಂಬರಿಗಳಲ್ಲಿ

ದಲಿತ ಪ್ರಶ್ನೆಯನ್ನು ಪ್ರಮುಖವಾಗಿ ತೆಗೆದುಕೊಂಡು ಚರ್ಚಿಸಿದ್ದಾರೆ. ಕುವೆಂಪುರವರು ತಮ್ಮ ಎರಡು ಕಾದಂಬರಿಗಳಲ್ಲೂ ಈ ವಿಚಾರವಾಗಿ ದಲಿತ ಸಮಸ್ಯೆಯ ಸಾದಕ-ಭಾಧಕಗಳನ್ನು ಕುರಿತು ಚರ್ಚಿಸಿದ್ದಾರೆ. 'ಗೋರೂರು ರಾಮಸ್ವಾಮಿ ಅಯ್ಯಂಗಾರ್‌ರವರು' 'ಹೇಮಾವತಿ' ಯಲ್ಲೂ, ಎಂ. ವಿ. ಸೀತಾರಾಮಯ್ಯನವರು 'ಮಾದನ ಮಗಳು'ವಿನಲ್ಲಿ, ರಾವ್ ಬಹದ್ದೂರ್‌ರವರು 'ಗ್ರಾಮಾಯಣ'ದ ಮೂಲಕ ದಲಿತ ಸಮಸ್ಯೆಗಳನ್ನು ಒಳಗೊಂಡ ಕಾದಂಬರಿಗಳನ್ನು ನವೋದಯದ ಸಂದರ್ಭದಲ್ಲಿ ರಚಿಸಿದ್ದಾರೆ. ಆಗಿನ ಸಂದರ್ಭದಲ್ಲಿ ದಲಿತರ ಜೀವನದ ಬಗ್ಗೆ ಯೋಚಿಸುವಷ್ಟು ವ್ಯವಧಾನ ಯಾವ ರಾಜಕಾರಣಿಗಳಿಗೂ ಇರಲಿಲ್ಲ. ಅದು ಸ್ವಾತಂತ್ರ್ಯ ಹೋರಾಟದ ಉತ್ತುಂಗ ಶಿಖರದಲ್ಲಿ ಅಂದಿನ ರಾಜಕೀಯ ವ್ಯಕ್ತಿಗಳು ಇದ್ದ ಸಂದರ್ಭ. ಇಂತಹ ಸಂದರ್ಭದಲ್ಲಿ ನವೋದಯದ ಲೇಖಕರು ತಮ್ಮ ಸೃಜನಶೀಲ ಕಾದಂಬರಿಗಳ ಮೂಲಕ ದಲಿತರ ಸಮಸ್ಯೆಗಳಿಗೆ ಉತ್ತರವನ್ನು ಹುಡುಕುವ ಪ್ರಯತ್ನನಡೆಸಿದ್ದು ತುಂಬಾ ಕ್ರಾಂತಿಕಾರಕ ವಿಚಾರವಾಗಿತ್ತು. ಈ ಲೇಖಕರಿಗೆ ಎರಡನೇ ಮಹಾಯುದ್ದದ ನಂತರ ಯುರೋಪಿನಲ್ಲಿ ಸಾಂಸ್ಕೃತಿಕ ಪುನರುಜ್ಜೀವನ ಕ್ರಾಂತಿಯ ಸಂದರ್ಭದಲ್ಲಿ ಆಫ್ರಿಕಾದ ಕಪ್ಪು ಸಾಹಿತಿಗಳು ತಮ್ಮ ಪ್ರಭುತ್ವದ ವಿರುದ್ಧ ನಡೆಸಿದ ವಿರೋಧಿ ಧೋರಣೆಯು ಸಹ ಇವರಿಗೆ ಈ ಸಾಹಿತ್ಯದಲ್ಲಿ ಕೃಷಿ ನಡೆಸಲು ಪ್ರೇರೆಪಿಸಿರಬಹುದು.

ನವೋದಯ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ದಲಿತ ಪರಚಿಂತನೆಯನ್ನು, ಅವರ ಬದುಕಿನ ಚಿತ್ರಣಗಳನ್ನು ಮೊದಲು ದಾಖಲಿಸಿದವರು ಶಿವರಾಮ ಕಾರಂತರು, ೧೯೩೩ರಲ್ಲಿ ಪ್ರಕಟವಾದ ಆವರ 'ಚೋಮನ ದುಡಿ' ಕಾದಂಬರಿಯು ೨೦ನೇ ಶತಮಾನದ ಮೊದಲ ದಲಿತಪರ ನಿಲುವಿನಿಂದ ರಚಿತವಾದ ಕಾದಂಬರಿಯಾಗಿದೆ. ಬ್ರಾಹ್ಮಣ ಲೇಖಕನೊಬ್ಬ ಸಮಾಜದ ಅತ್ಯಂತ ಕೆಳಸ್ತರದ ಜನಜೀವನದ ಚಿತ್ರಣವನ್ನು ಕಟ್ಟಿಕೊಟ್ಟು ಕನ್ನಡ ಸಾಹಿತಿಗಳನ್ನು ಹುಬ್ಬೇರಿಸುವಂತೆ ಮಾಡಿತು. ಕಾರಂತರು ಎಂದೂ ಸಿದ್ಧಾಂತಗಳಿಗೆ ಕಟ್ಟು ಬಿದ್ದವರಲ್ಲ. ಅವರು ತಮ್ಮ ಸಂದರ್ಭದ ಅನೇಕ ಸಮಸ್ಯೆಗಳಿಗೆ ಸೃಜನಶೀಲ ಕೃತಿಗಳಿಂದ ನೇರವಾಗಿ ಇಲ್ಲವೇ ನಿಷ್ಠುರವಾಗಿ ಪ್ರತಿಕ್ರಿಯಿಸಿದವರು. ಇವರು ಸಾಹಿತ್ಯ ಕೃಷಿಯ ಜೊತೆಗೆ ವೇಶ್ಯಾ ಕುಲದಲ್ಲಿ ಹುಟ್ಟಿದ ಹೆಣ್ಣು ಮಕ್ಕಳಿಗೆ ಮದುವೆ ಮಾಡಿಸುವ ಪ್ರಯತ್ನವನ್ನು ಮಾಡಿದರು. ಈ ಕಾಯಕದಿಂದ ಹಲವಾರು ಕಷ್ಟ ಕಾರ್ಪಣ್ಯಗಳನ್ನು ಎದರಿಸಿದರು. ಕೊನೆಗೆ ಅತ್ಯಂತ ನಿರಾಶೆಯಿಂದ ಗಾಂಧೀಜಿಯವರಿಗೆ ಒಂದು ಪತ್ರ ಬರೆದರು. ಗಾಂಧಿಜಿಯವರು ಶಿವರಾಮ ಕಾರಂತರ ಪ್ರಶ್ನೆಗೆ ಹೀಗೆ ಉತ್ತರಿಸಿದರು 'ಅಂತ ಹುಡುಗಿಯರು ಯಾವ ಜ್ಜೀವ ಬ್ರಹ್ಮಚರ್ಯೆ ನಡೆಸಲಿ' ಎಂಬ ಗಾಂಧೀಜಿಯ ಉತ್ತರದಿಂದ ಅವರು ತುಂಬಾ ನಿರಾಶೆ ಹೊಂದಿದರು. "ಮನುಷ್ಯ ಸ್ವಭಾವದ ಪರಿಚಯವೇ ಗಾಂಧೀಜಿಗಿಲ್ಲ! ತಾವು ಮಾಡಿದ್ದು ಎಲ್ಲಾರಿಂದಲೂ ಆಗುತ್ತದೆ-ಎಂದು ತಿಳಿದು ಕೊಂಡಿದ್ದಾರೆ." (ಶಿವರಾಮ ಕಾರಂತ : ಹು, ಮ. ಹ ಮುಖಗಳು : ೫೪) ಎನಿಸುತ್ತದೆ. ಇದರಿಂದ ಆದರ್ಶ ಮತ್ತು ಅನಿವಾರ್ಯತೆಗಳ ದ್ವಂದ್ವವನ್ನು ಕಾರಂತರು ಜೀವನದಲ್ಲಿ ಎದುರಿಸಿದರು. ತಮ್ಮ ಕಾದಂಬರಿಗಳ ವಿಮರ್ಶೆಗಳಿಗಾಗಿ ಭ್ರಮನಿರಶನಗೊಂಡರು. ಇವರು ದಲಿತ ಬದುಕಿನ ವಿವಿಧ ಸೂಕ್ಷ್ಮ ಅವಲೋಕವನ್ನು ತಮ್ಮ 'ಚೋಮನ ದುಡಿ' ಕಾದಂಬರಿಯಲ್ಲಿ ಮಾಡಿದ್ದಾರೆ. ನಂತರ ಬಂದ ಕುವೆಂಪುರವರು ಸಹ ದಲಿತಪರ ಕಾಳಜಿಯನ್ನು ತಮ್ಮ ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾರೆ.

ಕುವೆಂಪುರವರು ತಮ್ಮ ವೈಚಾರಿತ ಪ್ರಜ್ಞೆಯಿಂದ ಸಮಾಜದಲ್ಲಿ ಜಾಗೃತಿಯನ್ನು ಸಾಹಿತ್ಯದ ಮೂಲಕ ಉಂಟು ಮಾಡಿದರು. ಕುವೆಂಪುರವರಿಗೆ ದತ್ತವಾಗಿದ್ದ ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯಿಂದ ಪಡೆದ ವೈಚಾರಿಕಯಿಂದ ಹಿಂದೂ

ಧರ್ಮದಲ್ಲಿದ್ದ ಅನೇಕ ಮೂಢನಂಬಿಕೆ, ಆಚರಣೆ, ಸಂಪ್ರದಾಯಗಳನ್ನುಸೃಜನಶೀಲ ಕೃತಿಗಳ ಮೂಲಕ ಖಂಡಿಸಿದರು. ಕುವೆಂಪುರವರು ಈ ದಾರಿಯಲ್ಲಿ ನಡೆದು ಕನ್ನಡ ಸಾಹಿತ್ಯಕ್ಕೆ ಹೊಸ ಬೆಳಕನ್ನು ತಂದರು. ಅವರು ಶೋಷಿತ ಜನಾಂಗದ ಧ್ವನಿಯಾದರು. ಅವರ ಸಾಹಿತ್ಯದಲ್ಲಿ ಚಿತ್ರಿತವಾದ ಜಲಗಾರ, ಶಂಭೂಕ ಮತ್ತು ಏಕಲವ್ಯ ಈ ಪಾತ್ರಗಳು ದಲಿತ ಸಮಾಜವನ್ನು ಪ್ರತಿನಿಧಿಸುತ್ತದೆ. 'ವಾಸ್ತವವಾದ' ದ ಲಕ್ಷಣಗಳನ್ನು ಈ ಪಾತ್ರಗಳು ಒಳಗೊಂಡಿರುವುದನ್ನು ನೋಡಬಹುದು. ಪುರಾಣ ಪಾತ್ರಗಳನ್ನು ಹೊಸ ದೃಷ್ಟಿ ಕೋನದಿಂದ ಪುನರ್‌ಸೃಷ್ಟಿಸಿದ ಕೀರ್ತಿ ಕುವೆಂಪುರವರಿಗೆ ಸಲ್ಲುತ್ತದೆ. ದಲಿತರ ನೆಲೆಯಲ್ಲಿ ನಿಂತು ದಲಿತರ ದಲಿತ ಜೀವನ ಚಿತ್ರಣವನ್ನು.ದಲಿತರ ಪ್ರಜ್ಞೆಯ ಬೆಳಕಲ್ಲೆ ಅವರ ಸಮುದಾಯದ ಚಿತ್ರಣವನ್ನು ಅವರ ವಿವೇಕದಿಂದಲೇ ನೀಡುವುದು ಎಲ್ಲಾ ಸೃಜನಶೀಲ ಬರಹಗಾರರಿಗೂ ಸಾಧ್ಯವಿಲ್ಲ. ಆದರೆ ಕುವೆಂಪುರವರು ಈ ಕಾರ್ಯದಲ್ಲಿ ಯಶಸ್ವಿಯಾಗಿದ್ದಾರೆ. ಜಲಗಾರ, ಶಂಭೂಕ ಮತ್ತು ಏಕಲವ್ಯ ಇವರು ದಲಿತ ಸಾಂಸ್ಕೃತಿಯ ಪ್ರತಿನಿಧಿಗಳು ಇವರುಗಳನ್ನು ಅಥವಾ ಈ ಪಾತ್ರಗಳನ್ನು ಸೃಜಶೀಲ ಪ್ರಕ್ರಿಯೆಗಳಲ್ಲಿ ದುಡಿಸಿಕೊಳ್ಳಲು ಸೃಜನಶೀಲಶಕ್ತಿ ಹಾಗೂ ಪುರಾಣದ ಪ್ರಜ್ಞೆ ಇರಬೇಕಾಗುತ್ತದೆ. ಕುವೆಂಪುರವರಿಗೆ ಶೂದ್ರ ಸಮುದಾಯದ ಪ್ರಜ್ಞೆ ಇದ್ದಂತೆ ತನ್ನ ಕೆಳಗಿನ ದಲಿತ ಲೋಕದ ಪ್ರಜ್ಞೆಯು ಸಹ ಇತ್ತು. ಈ ಕಾರಣದಿಂದಾಗಿ ಮೇಲಿನ ಪಾತ್ರಗಳು ಹುಸಿ ಬಂಡಾಯವನ್ನು ವ್ಯಕ್ತ ಪಡಿಸದೆ, ದಲಿತ ಪರವಾದ ನಿಲುವನ್ನು ಹೊಂದಿವೆ. ದಲಿತ ಪರವಾದ ಕುವೆಂಪುರವರ ಚಿಂತನೆಗಳು ಕೇವಲ ನಾಟಕಗಳಿಗಷ್ಟೆ ಸೀಮಿತವಾಗದೆ ಅವರ ಪ್ರಸಿದ್ಧ ಕಾದಂಬರಿಗಳಾದ 'ಕಾನೂರು ಸುಬ್ಬಮ್ಮ ಹಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮೆಗಳು' ಕೃತಿಗಳಲ್ಲಿಯು ಸಹ ಜೀವಪಡೆದಿವೆ.

ಹೀಗೆ ಜೀವ ಪಡೆದ ದಲಿತ ಚಿತ್ರಣಗಳನ್ನು ಹಲವಾರು ವಿಮರ್ಶಕರು ಹಲವು ದೃಷ್ಟಿಯಿಂದ ಇಲ್ಲಿನ ದಲಿತ ಪಾತ್ರಗಳ ಚಿತ್ರಣದ ಬಗ್ಗೆ ಅಪಸ್ವರಗಳನ್ನು ಎತ್ತಿದ್ದಾರೆ. ಅವುಗಳನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದು.

* * *

## ಅಧ್ಯಾಯ -೩

# "ದಲಿತ ಜಗತ್ತು" ಅರ್ಥ ಮತ್ತು ವ್ಯಾಖ್ಯೆ

'ದಲಿತ' ಎನ್ನುವ ಪದ ಪುಸ್ತುತ ಸಂದರ್ಭದಲ್ಲಿ ದೇಶದ ತುಂಬಾ ಭಿನ್ನವಾದ ಅರ್ಥದಿಂದ ಪ್ರಕಟವಾಗುತ್ತಿದೆ. ಇಂದು 'ಹರಿಜನ' ಎಂದು ಅಸ್ಪೃಶ್ಯರಿಗೆ ಪರ್ಯಾಯವಾಗಿ ಕರೆಯಲಾಗುತ್ತದೆ. ಆದರೆ ಹೀಗೆ ಕರೆಯುವುದರಿಂದ ಅನೇಕ ಸಮಸ್ಯೆಗಳು ಉಂಟಾಗುತ್ತವೆ. ಹೇಗೆಂದರೆ ಅಸ್ಪೃಶ್ಯರು ಮಾತ್ರ ಹರಿಯ ಮಕ್ಕಳಾದರೆ ಉಳಿದ ಜನಾಂಗದವರು ಯಾರ ಮಕ್ಕಳು? ಎಂಬ ಪ್ರಶ್ನೆ ಉದ್ಬವಿಸುತ್ತದೆ. ಈ ಕಾರಣಕ್ಕಾಗಿ ಹರಿಜನ ಎಂಬ ಪದ ಅಸ್ಪೃಶ್ಯ ಎಂಬ ಪದಕ್ಕೆ ಅಷ್ಟಾಗಿ ಹೊಂದಿಕೊಳ್ಳವುದಿಲ್ಲಾ ಎಂಬುದು ಹಲವು ದಲಿತ ಚಿಂತಕರ ಅಭಿಪ್ರಾಯ. ಅಸ್ಪೃಶ್ಯ ಜನಾಂಗಕ್ಕೆ ಭಾರತಾದ್ಯಂತ ಹೊಂದಿಕೆಯಾಗಬಹುದಾದ ಒಂದೇ ಪದವೆಂದರೆ ಅದು 'ದಲಿತ' ಎಂಬುದು ಮಾತ್ರ. ಅಂಬೇಡ್ಕರ್ ರವರು ತಮ್ಮ ಸಾಹಿತ್ಯದ ಉದ್ದಕ್ಕೂ 'ಡಿಪ್ರೆಸ್ಡ್' (Depressed) ಅಂದರೆ ದಲಿತ ಎಂಬ ಪದವನ್ನೇಬಳಸಿದ್ದಾರೆ.

ದಲಿತ ಎಂಬ ಪದ ಸಂಸ್ಕೃತ ಮೂಲದ್ದು. 'ದಲ' ಎಂಬ ಶಬ್ದದಿಂದ ಈ ಪದದ ಉಗಮವಾಗಿದೆ. 'ದಲ' ಎಂದರೆ ಚೂರು, ತುಂಡು, ಎಲೆ ಮುಂತಾದ ಅರ್ಥಗಳಿವೆ. 'ದಲಿತ' ಎಂಬ ಪದಕ್ಕೆ ಹಿಂಸೆಗೆ ಒಳಗಾದ, ತುಳಿತಕ್ಕೆ 'ಒಳಗಾದ ಎಂಬ ಅರ್ಥಗಳ ಜೊತೆಗೆ 'ಸೋಲಿಸಲಾಗದ' ಎಂಬ ಅರ್ಥವನ್ನು ಸಹ ಮೇಲಿನ ಪದ ಕೊಡುವುದಾಗಿ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

'ದಲಿತ' ಎಂಬ ಪದಕ್ಕೆ ನಿಘಂಟುಗಳಲ್ಲಿ ಈ ಕೆಳಗಿನ ಅರ್ಥಗಳಿವೆ. ಕಿಟೆಲ್‌ರವರ ಕನ್ನಡ-ಇಂಗ್ಲೀಷ್ ನಿಘಂಟುವಿನಲ್ಲಿ ದಲಿತ್-ದಲನ್-ದಲಿತ ಎಂಬ ಪದಗಳಿಗೆ ಒಡೆಯುವುದು. ಸೀಳುವುದು. ಹೊಳಾಗುವುದು. ತುಂಡು ತುಂಡಾಗುವುದು. ಎಂಬ ಸಮಾನಾರ್ಥಕ ಪದಗಳಿವೆ. ಭಾಗಶಃ ಎಲ್ಲಾ ನಿಘಂಟುಗಳಲ್ಲಿ (ಶಿವರಾಮ ಕಾರಂತರ ಸಿರಿಗನ್ನಡ ಅರ್ಥಕೋಶ, ಐ.ಬಿ. ಎಚ್‌ರವರ ಕನ್ನಡ-ಕನ್ನಡ ಇಂಗ್ಲೀಷ್ ನಿಘಂಟು) ಮೇಲಿನ ಅರ್ಥವನ್ನೇ ಹೇಳಲಾಗಿದೆ. ಆದರೆ ಕನ್ನಡ ರತ್ನ ಕೋಶದಲ್ಲಿ ದಲಿತ ಎಂಬ ಪದಕ್ಕೆ ಸೀಳಲ್ಪಟ್ಟ ಎಂಬ ಅರ್ಥದ ಜೊತೆಗೆ ಧಮನಕ್ಕೆ ಒಳಗಾದ ಎಂಬ ಅರ್ಥವನ್ನು ಹೇಳಲಾಗಿದೆ

ದಲ, ದಲತ್ ಮತ್ತು ದಲನ್ ಎಂಬ ಪದಗಳಿಂದ ದಲಿತ ಎಂಬ ಪದ ಉತ್ಪತ್ತಿಯಾಗಿರಬಹುದೆಂದು ಮೇಲಿನ ಉಲ್ಲೇಖಗಳಿಂದ ತಿಳಿಯುತ್ತದೆ. ದಲ-ದಲತ್ ಮತ್ತು ದಲನ್ ಎಂಬ ಪದಗಳಿಗೆ ಇರುವ ಅರ್ಥವು ಗಮನಿತ ವ್ಯಕ್ತಿಗಳ ಬಗೆಗಿನ ಅರ್ಥವನ್ನು ಕೊಡುತ್ತದೆ. ದಲಿತರು ಎಂದರೆ ಯಾರು ? ಎಂಬ ವಿದ್ವಾಂಸರ ಪ್ರಶ್ನೆಗಳಿಗೆ ಉತ್ತರಿಸುವಾಗ ಮೇಲಿನ ವ್ಯಾಖ್ಯೆಗಳ ಮೂಲಕ ತಮ್ಮ ನಿಲುವನ್ನು ಗಟ್ಟಿಗೊಳಿಸಿಕೊಳ್ಳಬಹುದು.

ವೈದಿಕ ಸಂಸ್ಕತಿ ಈ ದೇಶಕ್ಕೆ ಕಾಲಿಡುವ ಮೊದಲು ದ್ರಾವಿಡರಲ್ಲಿ ಜಾತಿ ವ್ಯವಸ್ಥೆ ಇರಲಿಲ್ಲ. ಇಲ್ಲಿ 'ಕುಲ ಪದ್ಧತಿ' ಎಂಬ ಆಚರಣೆ ರೂಢಿಯಲ್ಲಿತ್ತು. ದ್ರಾವಿಡರ ಈ ಕುಲ ಪದ್ಧತಿಗೆ ವಿರುದ್ಧವಾಗಿ ಆರ್ಯರು ವರ್ಣ-ಜಾತಿ ಪದ್ಧತಿಯ ಆಚರಣೆಯನ್ನು ಜಾರಿಗೆ ತಂದರು. ಇವರ ಉದ್ದೇಶ ಸಮಾಜವನ್ನು ವಿಭಾಗಿಸಿ ಆಡಳಿತ ನಡೆಸುವುದಾಗಿತ್ತು. 'ಹೊಲೆಯ' ಮತ್ತು 'ಮಾದಿಗ' ಎಂಬ ಪದಗಳಿಗೆ ಪ್ರಾಚೀನ ಕಾಲದಲ್ಲಿ ಒಳ್ಳೆಯ ಅರ್ಥಗಳು ಇದ್ದವು. ಪೊಲೆ+ಅ=ಪೊಲೆಯ, ಮಾದ+ಇಗ= ಮಾದಿಗ ಎಂಬ ಪದಗಳಿಗೆ ಸಮೃದ್ದಿಯಾನ್ನುಂಟುಮಾಡು ಎಂಬ

ವಿಶಾಲಾರ್ಥವಿರುವುದನ್ನು ಟಿ. ಆರ್. ಚಂದ್ರಶೇಖರ್‌ರವರು ದಲಿತ ಅಧ್ಯಯನದಲ್ಲಿ ಗುರುತಿಸಿದ್ದಾರೆ. ದಲಿತರು ಅಸ್ಪೃಶ್ಯರಾದ ಕಾಲದಲ್ಲಿ ಈ ಪದಗಳಿಗೆ ಹೀನಾರ್ಥವನ್ನು ಆರೋಪಿಸಲಾಗಿದೆ. ಎಂದು ಗುರುತಿಸುತ್ತಾರೆ. ದ್ರಾವಿಡ ಸಮಾಜದಲ್ಲಿ ಮೂಲ ಕೃಷಿಕರಾದ ದಲಿತರು ಹಳ್ಳಿಯ ಸಂಸ್ಕೃತಿಯನ್ನು ನಿರ್ಮಿಸಿದರು. ಉದಾ : ಕುರುಬರು, ಬೇಡರು, ಗೋಲ್ಲರು ಮೊದಲಾದವರು ಪಶುಪಾಲಕ ವೃತ್ತಿಯನ್ನು ಅವಲಂಬಿಸಿ ಹಳ್ಳಿಗಳ ಉಗಮಕ್ಕೆ ಕಾರಣರಾದರು.

ಪ್ರಸ್ತುತ ಸಂದರ್ಭದಲ್ಲಿ 'ದಲಿತ' ಎಂಬ ಪದಕ್ಕೆ ಒಂದೇ ವ್ಯಾಖ್ಯಾನವನ್ನು ನೀಡಲು ವಿದ್ವಾಂಸರು ವಿಫಲರಾಗಿದ್ದಾರೆ. ಏಕೆಂದರೆ ದಲಿತ ಎಂಬ ಪದದ ಅರ್ಥ ಸ್ಪಷ್ಟತೆಯನ್ನು ಕುರಿತಾದ ಸಮಸ್ಯೆಯನ್ನು ಇದು ಸೂಚಿಸುತ್ತದೆ. ಈ ಹಿನ್ನಲೆಯಲ್ಲಿ ದಲಿತ ಪದದ ಕೆಲವು ಮುಖ್ಯವಾದ ವ್ಯಾಖ್ಯಾನಗಳನ್ನು ನೋಡಬಹುದು.

"ದಲಿತ ಎಂದರೆ ಅಸ್ಪೃಶ್ಯ ಹಾಗೂ ಸಣ್ಣ ಪ್ರಮಾಣದಲ್ಲಿ ಅಸ್ಪೃಶ್ಯತೆಯ ಅನುಭವವಿಲ್ಲದಿದ್ದರೂ ಅತ್ಯಂತ ವೇದನೆಗೆ ಒಳಗಾದ, ಚದುರಿ ಹೋಗಿರುವ ಜನಾಂಗದ ಪ್ರತಿನಿಧಿಗಳೂ ಪ್ರಗತಿಪರ ದಲಿತ ಸಂಘಟನೆಯೊಂದಿಗೆ ತಮ್ಮನ್ನು ತಾವು ಗುರ್ತಿಸಿಕೊಂಡು, ತಮ್ಮ ಸಾಹಿತ್ಯ ಮತ್ತು ಸಂಘಟನೆಗಳ ಮೂಲಕ ಅಸ್ಪೃಶ್ಯತೆಯನ್ನು ಅಸಮಾನತೆಯನ್ನು ತೊಡೆದುಹಾಕಲು ಪ್ರಯತ್ನ ಪಡುವಂಥವರೂ ಆಗಿರುತ್ತಾರೆ. ಅಂದರೆ ತಲ ತಲಾಂತರದಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿದ ಜನಾಂಗದವರು ಮಾತ್ರ ದಲಿತರು" [೧] ಎಂಬ ಅಭಿಪ್ರಾಯವನ್ನು ಹಿರಿಯ ದಲಿತ ಸಾಹಿತಿ ದೇವಯ ಹರವೆಯವರು ತಮ್ಮ ಹೇಳಿಕೆ ನೀಡಿದ್ದಾರೆ.

"ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು. ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ. ಊರ ಹೊರಗೆ ವಾಸಿಸಿ, ಕೀಳು ವೃತ್ತಿಗೆ ಅವಲಂಬಿತರಾಗಿ, ಹೆಸರು ಹೇಳಿಕೊಳ್ಳಲೂ ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ, ದಲಿತರೆನಿಸಿಕೊಳ್ಳುತ್ತಾರೆ."[೨] ಎಂಬುದು ಅರವಿಂದ ಮಾಲಗತ್ತಿಯವರ ಅಭಿಪ್ರಾಯ.

ಆರ್. ಬಿ. ಭಂಡಾರಿಯವರು "ಯಾರು ಕಲಾಂತರದಿಂದ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಣೆಗೊಳಗಾದ ಪಂಗಡ ಅಥವಾ ಜಾತಿ ಇದೆಯೋ ಅದು ಮಾತ್ರ ದಲಿತ ಎಂಬ ಪಟ್ಟಿಯಲ್ಲಿ ಬರುತ್ತದೆ. ಅಂಥವರು ಹೊಲೆ ಮಾದಿಗರು, ಭಂಗಿಗಳು, ಮುಕ್ರಿ, ಆಗೇರ ಮುಂತಾದ ಅಸ್ಪೃಶ್ಯರೇ ಆಗಿದ್ದಾರೆ. ಅವರೇ ದಲಿತರು"[೩] ಎಂಬ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.

ಜಿ. ಬಿ. ವಿಸಾಜಿ ಯವರು "ಸಮಾಜದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ತುಳಿಯಲ್ಪಟ್ಟವರೆಲ್ಲಾ ದಲಿತರು ಮೇಲ್ವರ್ಗದವರ ಶೋಷಣೆಗೊಳಗಾಗಿಯು ಅದನ್ನರಿಯದೇ ಇದು ತಮ್ಮ 'ಕರ್ಮ', 'ಪಾಪ'ದ ಫಲ ಎಂದು ಸಾವಿರಾರು ವರ್ಷಗಳಿಂದ ನೆಲಕಚ್ಚಿ ಸಹಿಸುತ್ತಾ ಬಂದಿರುವವರು ದಲಿತರು"[೪] ಎಂಬ ಅಭಿಪ್ರಾಯ ಹೊಂದಿದ್ದಾರೆ.

ಸಿ. ವೀರಣ್ಣನವರು ತಮ್ಮ 'ಸಾಹಿತ್ಯ ಮತ್ತು ಸಮುದಾಯ' ದಲ್ಲಿ "ದಲಿತರೆಂದರೆ ಯಾರು ಎಂಬ ಪ್ರಶ್ನೆಗಳಿಗೆ ಅನೇಕರು ಅನೇಕ ವಿಧವಾದ ಉತ್ತರಗಳನ್ನು ಸೂಚಿಸಲು ಯತ್ನಿಸಿದ್ದಾರೆ. ಅವುಗಳಲ್ಲಿ ಎರಡನ್ನು ಪ್ರಮುಖವಾಗಿ ಗಮನಿಸಬಹುದು. ಮೊದಲನೆಯದಾಗಿ ಜಾತಿಯಿಂದ ಕೀಳಾಗಿ ಕಂಡ ಯಾರನ್ನು, ಅಸ್ಪೃಶ್ಯರನ್ನು ಸವರ್ಣೀಯರು ದೂರವಿರಿಸಿದರೊ ಅವರೇ ದಲಿತರು ಎನ್ನಬಹುದು. ಮತ್ತೊಂದು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತುಳಿತಕ್ಕೊಳಗಾಗಿರುವ ಜಾತಿಗಳಲ್ಲಿರುವವರೆಲ್ಲಾ ದಲಿತರು ಎನ್ನುವ ವಿವರಣೆ. ಈ ಎರಡೂ ರೀತಿಯ ವಿವರಣೆಗಳು ದಲಿತ ಸಾಹಿತ್ಯ ಚಳುವಳಿಕಾರರಲ್ಲಿಯೇ ಕಂಡುಬಂದಿರುವುದು ಉಂಟು. ಆದರೆ ಎಲ್ಲಾ ಜಾತಿಗಳಲ್ಲಿಯೂ ತುಳಿತಕ್ಕೊಳಗಾಗಿರುವವರನ್ನೆಲ್ಲಾ ದಲಿತರು ಎಂದು ಕರೆದು 'ದಲಿತ' ಪದದ ವ್ಯಾಪ್ತಿಯನ್ನು ವಿಸ್ತರಿಸುವುದಕ್ಕಿಂತ ಈಗ ಅದು ಹುಟ್ಟು ಬೆಳೆದಿರುವ

ಹಿನ್ನಲೆಯಲ್ಲಿ ಅದನ್ನು ಅಸ್ಪೃಶ್ಯ ಜನಾಂಗಕ್ಕೆ ಸೀಮಿತಗೊಳಿಸುವುದು ಚಾರಿತ್ರಿಕ ಅಧ್ಯಯನದ ದೃಷ್ಟಿಯಿಂದ ಸೂಕ್ತವೆನಿಸುತ್ತದೆ." ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮೇಲಿನ ಎಲ್ಲಾ ಹೇಳಿಕೆಗಳನ್ನು ಗಮನಿಸಿದಾಗ ದಲಿತರೆಂದರೆ ಸಾಮಾಜಿಕವಾಗಿ ಆರ್ಥಿಕ, ಶೈಕ್ಷಣಿಕವಾಗಿ ಹಿಂದಿನಿಂದಲೂ ಹಿಂಸೆಗೆ ಒಳಗಾದ ಅಸ್ಪೃಶ್ಯ ಅಥವಾ ಪಂಚಮರು ಮಾತ್ರ ದಲಿತರು ಎಂಬ ಅಭಿಪ್ರಾಯವನ್ನು ಮೇಲಿನ ವಿದ್ವಾಂಸರು ಹೊಂದಿದ್ದಾರೆ. ಆದರೆ ಇವರ ಈ ವಾದವನ್ನು ಹಲವು ವಿದ್ವಾಂಸರು ಒಪ್ಪದೇ ಅವರದೇ ಆದ ಕೆಲವು ವ್ಯಾಖ್ಯೆಗಳನ್ನು ನೀಡಿದ್ದಾರೆ. ಈ ರೀತಿಯ ಭಿನ್ನ ವ್ಯಾಖ್ಯಾನುಗಳನ್ನು ನೀಡಿರುವವರಲ್ಲಿ ಪಿ. ವಿ. ವಜ್ರಮಟ್ಟಿಯವರು, ಖ್ಯಾತ ವೈದ್ಯಬರಹಗಾರ್ತಿಯಾದ ಅನುಪಮಾ ನಿರಂಜನ ಮತ್ತು ಕೆ. ಎಸ್. ಭಗವಾನ್ ರವರು ದಲಿತ ಪದದ ಬಗ್ಗೆ ವಿಶಾಲ ಅರ್ಥವನ್ನು ಊಹಿಸುತ್ತಾರೆ. ದಲಿತರೆಂದರೆ ಕೇವಲ ಅಸ್ಪೃಶ್ಯರು ಮಾತ್ರವಲ್ಲ ಬೇರೆ ಹಿಂದುಳಿದ, ಆರ್ಥಿಕವಾಗಿ ಸಂಕಷ್ಟದಲ್ಲಿರುವ ಇತರ ಸಮುದಾಯದವರು ಸಹ ದಲಿತರು ಎಂಬ ಹೇಳಿಕೆಯನ್ನು ನೀಡಿದ್ದಾರೆ. ಇವರ ಹೇಳಿಕೆಗಳನ್ನು ಕೆಳಗಿನಂತೆ ನೋಡಬಹುದು.

ಪಿ. ವಿ. ವಜ್ರ ಮಟ್ಟಿಯವರು "ತುಳಿಕ್ಕೊಳಗಾದವರು, ಅಸ್ಪೃಶ್ಯರು, ಕಾರ್ಮಿಕರು, ಭೂಹೀನರು, ಬಡ ರೈತರು, ಅಲೆಮಾರಿಗಳು, ಆದಿವಾಸಿಗಳು, ಬಡಮುಸ್ಲಿಮರು, ಶೋಷಣೆಗೆ ಬಳಗಾದ ಮಹಿಳೆಯರು, ಅಲ್ಲದೇ ಶೋಷಿತ ಬ್ರಾಹ್ಮಣರು ದಲಿತ ವರ್ಗದವರೆ. ಇವರೆಲ್ಲರ ಪರವಾಗಿ ನಿಂತ ಸಾಹಿತ್ಯ ದಲಿತ ಸಾಹಿತ್ಯ" (ಪಿ. ವಿ. ವಜ್ರಮಟ್ಟಿ : ೧೯೮೦ : ೧೩೩) ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ಇವರ ಅಭಿಪ್ರಾಯವು ಮಹಾರಾಷ್ಟ್ರದ ದಲಿತ ಪ್ಯಾಂಥರ್‌ನ ಪ್ರಕಟಿತ ಪ್ರಣಾಳಿಕೆಯಲ್ಲಿ ಈ ಹೇಳಿಕೆಯನ್ನು ನಮೂದಿಸಲಾಗಿದೆ. ಮಹಾರಾಷ್ಟ್ರದ ದಲಿತ ಪ್ಯಾಂಥರ್‌ನ ಪ್ರಕಾರ ದಲಿತರು ಮತ್ತು ದಲಿತ ಸಾಹಿತ್ಯ ಎಂದರೆ ಯಾವುದೇ ಸಂಕುಚಿತ ಅರ್ಥಗಳಿಗೆ ಅವಕಾಶವಿಲ್ಲದೆ ಅಸ್ಪೃಶ್ಯತೆಯ ಅನುಭವವುಳ್ಳ ಎಲ್ಲರೂ ಹಾಗೆಯೆ ಪ್ರಗತಿ ಪರವಾಗಿ ಚಿಂತಿಸುವ ಎಲ್ಲಾ ಲೇಖಕರು ದಲಿತ ಚಿಂತಕ ಎನಿಸಿಕೊಳ್ಳುತ್ತಾರೆ.

ಅನುಪಮ ನಿರಂಜನರು " ದಲಿತರು ಎಂದರೆ ಕ್ರೂರ ಸಮಾಜದಲ್ಲಿ, ಅಸ್ಪೃಶ್ಯ ಎನಿಸಿಕೊಂಡವರು ಮಾತ್ರ ಎಂಬ ಭಾವನೆಯಿದೆ. ಇದು ಸರಿಯೆಸಿಸದು. ಕೆಳ ಜಾತಿಯಿತರೆನಿಸಿಕೊಂಡವರಷ್ಟೇ ಅಲ್ಲದೇ ಎಲ್ಲಾ ಜಾತಿಗಳ ಶೋಷಿತರು ದಲಿತರೇ, ಇದಕ್ಕೆ ಲಿಂಗ ಭೇದವೂ ಇಲ್ಲ". ( ಅನುಪಮಾ ನಿರಂಜನ : ೧೯೮೧ : ೧೮೧) ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ.

" ದಲಿತ ಎಂದರೆ ಯಾರು ? ಸದ್ಯದ ಸಂದರ್ಭದಲ್ಲಿ ದಲಿತ ಶಬ್ದ ಅತೀಯಾಗಿ ಬಳಕೆಯಾಗುತ್ತಿದೆ. ಅದು 'ಹೊಲೆಯ' ಎಂಬ ಅರ್ಥದಲ್ಲಿ ಈ ವಿಪರೀತವಾಗಿ ಪ್ರಯೋಗವಾಗುತ್ತಿದ್ದು ಜಾತಿ ಸೂಚಕವಾಗಿಬಿಟ್ಟಿದೆ. ಈ ಅರ್ಥ ಸಮಸ್ಯೆಯನ್ನು ಸೀಮಿತಗೊಳಿಸುತ್ತದೆ. 'ದಲಿತ' ಅಂದರೆ ಹಿಂಸೆಗೆ ಒಳಗಾದವನು ಎಂದು ಅರ್ಥ. ದೈಹಿಕ ಮಾನಸಿಕ ಹೊಡೆತಕ್ಕೆ ಗುರಿಯಾದ, ಆರ್ಥಿಕ ಸಾಮಾಜಿಕ ಶೋಷಣೆಗೆ ಬಲಿಯಾದ, ಸಾಂಸ್ಕೃತಿಕವಾಗಿ ದಿವಾಳಿಯಾದ ಜನರೇ ದಲಿತರು. ದಲಿತರೆಂದರೆ ಕೇವಲ ಪರಿಶಿಷ್ಟ ಜಾತಿ ಬುಡಕಟ್ಟುಗಳಲ್ಲ. ವ್ಯವಸ್ಥೆಯ ಪೀಡನೆಯನ್ನು ತಾಳಲಾರದೆ ಕಣ್ಣೀರಿಗೆ ಬದಲು ರಕ್ತ ಸುರಿಸುವ ದುರ್ಬಲ ವರ್ಗವೇ ದಲಿತರು.

ದಲಿತ ಪದವನ್ನು ಹೊಲೆ–ಮಾದಿಗ ಎಂಬ ಸಂಕುಚಿತಾರ್ಥದಲ್ಲಿ ಉಪಯೋಗಿಸಲು ಆಗುವುದಿಲ್ಲ. ಏಕೆಂದರೆ ಹರಿಜನ–ಗಿರಿಜನರಲ್ಲಿ ಬಹುಮಂದಿ ಆರ್ಥಿಕವಾಗಿ ಭದ್ರವಾಗಿದ್ದಾರೆ. ವಿದ್ಯಾವಂತರಾಗಿ ದೊಡ್ಡ ಹುದ್ದೆಗಳನ್ನು ಪಡೆದಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಪ್ರತಿಷ್ಠಿತರಾಗಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಸಚಿವರಾಗಿ ಗಣ್ಯರಾಗಿದ್ದಾರೆ. ಆದ್ದರಿಂದ ಪಂಚಮರೆಲ್ಲ ದಲಿತರೆಂದು ಹೇಳುವುದು ಅರ್ಥಹೀನವಾಗುತ್ತದೆ.

ಎಲ್ಲಾ ಜಾತಿಗಳಲ್ಲೂ ಕಂಡುಬರುವ ಕಡು ಬಡವರೇ ದಲಿತರು. ತುಳಿತಕ್ಕೆ ಒಳಗಾಗಿ ಸುಳಿಗೆಗೆ ಆಹಾರವಾದ ದಬ್ಬಾಳಿಕೆಗೆ ಪಾದರಕ್ಷೆಯಾದ ದರಿದ್ರ ಜನರನ್ನು ದಲಿತರೆಂದು ಕರೆಯುವುದು ಅತ್ಯಂತ ಸಮಂಜಸ. ಅಲ್ಲದಿದ್ದರೆ ವಿಶಾಲ ತಾತ್ವಿಕ ದೃಷ್ಟಿ ಲಭ್ಯವಾಗುವುದಿಲ್ಲ".೬

ಮೇಲಿನ ಹೇಳಿಕೆಗಳನ್ನು ಗಮನಿಸಿದಾಗ ದಲಿತ ಪದದ ವ್ಯಾಖ್ಯಾನುಗಳು ಭಿನ್ನ ಅರ್ಥಗಳನ್ನು ಒಳಗೊಂಡಿರುವುದನ್ನು ನೋಡಬಹುದು. ಇದು ಪ್ರಸ್ತುತ ರಾಜಕೀಯ ವಿದ್ಯಾಮಾನಗಳ ಪರಿಣಾಮವಾಗಿ ಇದರ ವ್ಯಾಪ್ತಿ ಹೆಚ್ಚುತ್ತದೆ. ಸರ್ಕಾರ ವರ್ಷದಿಂದ ವರ್ಷಕ್ಕೆ ಹಿಂದುಳಿದವರ ಸಂಖ್ಯೆಯನ್ನು ಹೆಚ್ಚಿಸುತ್ತಾ ಬಂದಿದೆ. ಇಂದಿನ ಸಂದರ್ಭದಲ್ಲಿ ದಲಿತ ಎಂದರೆ ಅಸ್ಪಶ್ಯರಷ್ಟೆ ಅಲ್ಲದೇ ದೌರ್ಜನ್ಯಗಳಿಗೆ ಗುರಿಯಾಗಿರುವ ಹಲವು ಜಾತಿಗಳು ಸಹ ಇದರ ವ್ಯಾಪ್ತಿಗೆ ಬರುತ್ತವೆ. ಇದರಂತೆ ಹಿಂದುಳಿದ ಹಲವು ಪಂಗಡಗಳು, ಬುಡಕಟ್ಟುಗಳು ಸಹ ದಲಿತರೆನ್ನಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಉದಾಹರಣೆಗೆ : ರಾಜಸ್ಥಾನದ ಗುರ್ಜರ್ ಜನಾಂಗದವರು ತಮ್ಮ ಜನಾಂಗವನ್ನು ಪರಿಶಿಷ್ಟ ಬುಡಕಟ್ಟು ಮೀಸಲಾತಿ ಪಟ್ಟಿಗೆ ಸೇರಿಸಬೇಕೆಂದು ನಡೆಸಿದ ಚಳುವಳಿಯಲ್ಲಿ ಅನೇಕ ಸಾವು-ನೋವುಗಳು ಉಂಟಾದುದನ್ನು ನೋಡಬಹುದು. ಈ ಘಟನೆ ಸಂವಿಧಾನ ನಿಗಧಿ ಪಡಿಸಿದ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗಷ್ಟೇ ಅಲ್ಲದೇ ಸಮಾಜದಲ್ಲಿ ಶೋಷಣೆಗೆ ಒಳಗಾದ ದೌರ್ಜನ್ಯ ಗಳಿಗೆ ಸಿಲುಕಿದ ಎಷ್ಟೋ ಪಂಗಂಡಗಳು ದಲಿತರೆನಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ನೋಡಬಹುದು.

ದಲಿತ ಎಂಬ ಪದವು ೨೦ನೆ ಶತಮಾನದ ಎಪ್ಪತ್ತರ ದಶಕದಲ್ಲಿ ವಿಶೇಷವಾಗಿ ಬಳಕೆಗೆ ಬಂದಿತು. ಈ ಪದವು ಅಂದಿನ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಹೆಚ್ಚು ಬಳಕೆಗೆ ಬರುತ್ತಿತ್ತು. ಇದಕ್ಕೆ ಹಲವಾರು ಕಾರಣಗಳಿವೆ. ಸ್ವಾತಂತ್ರ್ಯ ನಂತರ ಹಿಂದುಳಿದ ಜನಾಂಗದ ಅಸ್ಪೃಶ್ಯರಿಗೆ ಅನೇಕ ಸಮವಲತ್ತುಗಳ ದೊರಕಿದವು. ಪರಿಣಾಮವಾಗಿ ಅಂದಿನ ದಲಿತರಿಗೆ ಹೆಚ್ಚು ಶಿಕ್ಷಣ ದೊರೆಯುವಂತಾಯಿತು. ಈ ಕಾರಣದಿಂದಾಗಿ ಅನೇಕ ಶೋಷಿತರು ಹೊಸ ಚಿಂತನೆಗಳಿಗೆ ತಮ್ಮನ್ನು ತೆರೆದುಕೊಂಡರು. ಇದರಿಂದ ಸಾಮಾಜಿಕ ಎಚ್ಚರ ಉಂಟಾಯಿತು. ಜಾತಿ, ಅಸಮಾನತೆ ಹಾಗೂ ಇವರ ಮೇಲೆ ನಡೆಯುತ್ತಿದ್ದ ದೌರ್ಜನ್ಯಗಳ ವಿರುದ್ಧ ಇವರು ಸಂಘಟಿತರಾಗಬೇಕು ಎಂಬ ಪ್ರಜ್ಞೆ ವಿದ್ಯಾವಂತರಲ್ಲಿ ಮೂಡಿತು.

೧೯೭೩ರ ನವೆಂಬರ್ ೨೦ ಮೈಸೂರಿನ ವಕೀಲ ಎನ್. ಸಿ. ಸಂಜೀವನ್ ಎಂಬುವರು ತಮ್ಮ ನೇತೃತ್ವದ 'ಅಂಬೇಡ್ಕರ್ ಸ್ಕೂಲ್ ಆಫ್ ಥಾಟ್' ಸಂಸ್ಥೆಯ ಆಶ್ರಯದಲ್ಲಿ ಮಹಾರಾಜ ಕಾಲೇಜಿನ ಶತಮಾನೋತ್ಸವ ಸಭಾಂಗಣದಲ್ಲಿ 'ಹೊಸ ಅಲೆ' ಎಂಬ ವಿಷಯ ಕುರಿತು ಬಸವಲಿಂಗಪ್ಪ ಅವರಿಂದ ಉಪನ್ಯಾಸ ಏರ್ಪಡಿಸಿದ್ದರು. ಆಗಿನ ಪೌರಾಡಳಿತ ಸಚಿವರಾಗಿದ್ದ ಬಿ. ಬಸವಲಿಂಗಪ್ಪನವರು ಮೈಸೂರಿನ ದಲಿತ ವಿದ್ಯಾರ್ಥಿಗಳ ಸಭೆಯೊಂದರಲ್ಲಿ ಭಾರತೀಯ ಸಾಹಿತ್ಯವನ್ನು ಕುರಿತು ಮಾತನಾಡುತ್ತಿದ್ದರು. ಭಾರತೀಯ ಸಾಹಿತ್ಯದಲ್ಲಿ ಅವೈಚಾರಿಕ ಮತ್ತು ಅವೈಜ್ಞಾನಿಕ ವಿಚಾರಗಳೇ ತುಂಬಿವೆ ಇದಕ್ಕೆ ಕನ್ನಡ ಸಾಹಿತ್ಯವು ಹೊರತಾಗಿಲ್ಲಾ. ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಈ ಸಭೆಯಲ್ಲಿ ಶೇ. ೮೦ರಷ್ಟು ದಲಿತ ವಿದ್ಯಾರ್ಥಿಗಳಿದ್ದರೆ. ಉಳಿದವರು ಪ್ರಗತಿಪರ ಚಿಂತನೆಯಲ್ಲಿ ಆಸಕ್ತಿ ಹೊಂದಿದವರು ಬಂದಿದ್ದರು.

ಸಭೆಯು ಆರಂಭವಾಗುತ್ತಿದ್ದಂತೆ ಸಂಜೀವನ್‌ರವರು ತಮ್ಮ ಇಂಗ್ಲೀಷ್ ಶೈಲಿಯಲ್ಲಿ ಸ್ವಾಗತ ಭಾಷಣ ಮಾಡಲು ಪ್ರಾರಂಭಿಸಿದರು. ಆಗ ಸಭೆಯಲ್ಲಿದ್ದವರು ಕನ್ನಡ ಕನ್ನಡ ಎಂಬ ಕೂಗನ್ನು ಎಬ್ಬಿಸಿದರು. ವೇದಿಕೆಯಲ್ಲಿದ್ದ ಬಸವಲಿಂಗಪ್ಪನವರು ಅವರನ್ನು ಸಮಾದಾನಿಸಿದರು. ಸ್ವಾಗತ ಭಾಷಣ ಮುಗಿದ ಮೇಲೆ ಬಸವಲಿಂಗಪ್ಪನವರು ಮಾತನಾಡಲು ನಿಂತರು. ವಿದ್ಯಾರ್ಥಿ ಸಮೂದಾಯ ಕಂಡು ಹುರುಪಿನಿಂದ ಇದ್ದ ಆವರು "ಏನು ಕನ್ನಡ ಕನ್ನಡ ಎಂದು ಕೂಗಿಕೊಳ್ಳುತ್ತೀರಲ್ಲ? ಕನ್ನಡ

ಸಾಹಿತ್ಯದಲ್ಲಿ ಏನಿದೆ? ಅಲ್ಲಿ ನಿಮ್ಮ ದುಃಖ ದುಮ್ಮಾನ ಇದೆಯಾ ? ಅಲ್ಲಿರುವುದೆಲ್ಲ ಬುಸಾ ಸಾಹಿತ್ಯ ಕನ್ನಡ ಪುಸ್ತಕ ಓದುವುದರಿಂದ ದೇಶ ಪ್ರೇಮ, ಸ್ವತಂತ್ರ ವಿಚಾರಶಕ್ತಿ, ಧೈರ್ಯ, ಸೇವಾ ಭಾವನೆ ಬರುವುದಿಲ್ಲ. ಕನ್ನಡ ಅಭಿಮಾನ ಇರಬೇಕು. ಕನ್ನಡದಲ್ಲಿ ಮಾತನಾಡಬೇಕು. ಕನ್ನಡವನ್ನು ಬೆಳಸಬೇಕು. ಆದರೆ ಇಂಗ್ಲಿಷ್ ಓದುವುದರಿಂದ ವಿಚಾರಶಕ್ತಿ, ಸ್ವತಂತ್ರ ಮನೋಭಾವ, ದೇಶ ಪ್ರೇಮ ಎಲ್ಲಾ ಬರುತ್ತದೆ. ಎಂದು ಕೂಗಾಡುತ್ತಿದ್ದವರ ಮೇಲೆ ಕಿಡಿಕಾರಿದರು"೭. ಇವರ ಈ ಅಭಿಪ್ರಾಯದಲ್ಲಿ ವಿದ್ಯಾರ್ಥಿಗಳು ಪ್ರಗತಿಪರ ಚಿಂತನೆ ನಡೆಸಲು ಪ್ರಗತಿಪರ ಸಾಹಿತ್ಯ ಮತ್ತು ವಿಚಾರಗಳನ್ನು ಓದಬೇಕು ಎಂಬುದಾಗಿತ್ತು. ಆದರೆ ಕೆಲವು ಮೂಲಭೂತವಾದಿಗಳು ಇವರ ಹೇಳಿಕೆಯನ್ನು ತಿರುಚಿ ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು 'ಬೂಸಾ' ಎಂದು ಹೇಳಿದರೆಂದು. ಪತ್ರಿಕೆಯಲ್ಲಿ ವರದಿಗಳು ಬಂದವು. ಇದರಿಂದ ಅಧಿಕಾರದಲ್ಲಿದ್ದು ಕನ್ನಡ ಭಾಷೆಯನ್ನು ಅವಮಾನ ಮಾಡಿದ್ದಾರೆಂದು ಅರ್ಥ ಕಲ್ಪಿಸಿ ಅವರ ರಾಜೀನಾಮೆಗೆ ಒತ್ತಾಯಿಸಿದರು. ವಿದ್ಯಾರ್ಥಿಗಳ ಚಳುವಳಿ ಪ್ರಾರಂಭವಾಯಿತು. ದಲಿತ ವಿದ್ಯಾರ್ಥಿಗಳು ಬಸವಲಿಂಗಪ್ಪನವರ ಪರ ಚಳುವಳಿ ಪ್ರಾರಂಭಿಸಿದರು. ಪ್ರಗತಿಪರ ದಲಿತರು ಬಸವ ಲಿಂಗಪ್ಪ ಅವರ ಅಭಿಪ್ರಾಯವನ್ನು ಬೆಂಬಲಿಸಿ ಹೇಳಿಕೆಗಳನ್ನು ನೀಡಿದರು. ಚಳುವಳಿ ತೀವ್ರ ಸ್ವರೂಪ ಪಡೆಯಿತು. ಬಸವಲಿಂಗಪ್ಪನವರು ತಮ್ಮ ಹೇಳಿಕೆಗೆ ಬದ್ದರಾಗಿದ್ದರು. ಇದನ್ನು ಮತ್ತೆ ಸಮರ್ಥಿಸಿದರು. ಈ ಕಾರಣಕ್ಕಾಗಿ ಅವರು ಮಂತ್ರಿ ಪದವಿಯನ್ನು ಕಳೆದುಕೊಳ್ಳಬೇಕಾಯಿತು. ಇದರ ಪರಿಣಾಮದಿಂದಾಗಿ ಕರ್ನಾಟಕದ ಶೋಷಿತ ಅಸ್ಪೃಶ್ಯರೆಲ್ಲಾ ಸಂಘಟನೆಯನ್ನು ಸ್ಥಾಪಿಸಿ ಅದರ ಮೂಲಕ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಲು ತೀರ್ಮಾನಿಸಿದರು. ಅದರಂತೆ ೧೯೭೪ರಲ್ಲಿ ಭದ್ರಾವತಿಯಲ್ಲಿ ದಲಿತ ಸಂಘರ್ಷ ಸಮಿತಿ ಸ್ಥಾಪನೆಯಾಯಿತು. ಅಲ್ಲಿ ಮೊದಲಿಗೆ 'ದಲಿತ' ಪದದ ಪರಿಕಲ್ಪನೆಗೆ ಚಾಲನೆ ಸಿಕ್ಕಿತು. ಬಸವಲಿಂಗಪ್ಪನವರ ಮೇಲಿನ ಪ್ರಕರಣ ದಲಿತರು ಸಂಘಟಿತರಾಗಲು ಪ್ರೇರೆಪಿಸಿತು. ಈ ಕಾರಣಕ್ಕಾಗಿ ೧೯೭೬ರ ಡಿಸೆಂಬರ್ ೧೮,೧೯ ರದಂದು ಭದ್ರಾವತಿಯಲ್ಲಿ ' ಕರ್ನಾಟಕ ದಲಿತ ಲೇಖಕ, ಕಲಾವಿದರ ಸಮ್ಮೇಳನ' ನಡೆಯಿತು. ಈ ಸಂಘಟನೆಯಲ್ಲಿ ದಲಿತ ಲೇಖಕರು ಮುಂಚೂಣಿಯಲ್ಲಿದ್ದರು. ಈ ಕಾರಣದಿಂದಾಗಿ ದಲಿತ ಸಾಹಿತ್ಯಕ್ಕೆ ಚಾಲನೆ ಸಿಕ್ಕಿತು.

**೩.೧ ದಲಿತ ಸಾಹಿತ್ಯ :** ದಲಿತ ಸಾಹಿತ್ಯ ಎಂದರೆ, ದಲಿತರು ಸಮಾಜದಲ್ಲಿ ಎದುರಿಸುತ್ತಿದ್ದ. ಜಾತಿ ಸಮಸ್ಯೆ, ಅಸಮಾನತೆ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಹೋಗಲಾಡಿಸಲು ವಿದ್ಯಾವಂತ ದಲಿತ ಸಮುದಾಯದವರು ನೋವುಂಡ ಜನರ ಅನುಭವಗಳನ್ನು ಅಕ್ಷರ ರೂಪದಲ್ಲಿ ಪ್ರಕಟಿಸಲು ಪ್ರಾರಂಭಿಸಿದರು. ಇದನ್ನು ದಲಿತ ಸಾಹಿತ್ಯ ಎಂದು ಕರೆಯಲಾಗಿದೆ. ಅನಾದಿ ಕಾಲದಿಂದ ಮೇಲ್ವರ್ಗದ ಸಮುದಾಯದವರಿಂದ ಶೋಷಣೆಗೆ ಒಳಗಾಗಿ ಅನೇಕ ಕಷ್ಟ-ಕಾರ್ಪಣ್ಯಗಳನ್ನು ಎದುರಿಸಿ ಅಂತಿಮವಾಗಿ ನಾವು ಸಹ ಮನುಷ್ಯರು ಎಂಬ ಪ್ರಜ್ಞೆ ಉಂಟಾದ ದಿನದಿಂದ ದಲಿತ ಸಾಹಿತ್ಯಕ್ಕೆ ಚಾಲನೆ ಸಿಕ್ಕಿತು.ಈ ಸಂದರ್ಭದ ಶೋಷಿತರೆಲ್ಲರ ಹೋರಾಟದ ಫಲವಾಗಿ ಈ ಸಾಹಿತ್ಯ ಹುಟ್ಟಿಕೊಂಡಿತು.

ಭಾರತೀಯ ಭಾಷೆಗಳಲ್ಲಿ ಈ ಪರಿಕಲ್ಪನೆ ಹುಟ್ಟಿಕೊಂಡದ್ದು ಮೊದಲು ಮರಾಠಿ ಭಾಷೆಯಲ್ಲಿ, ಇಲ್ಲಿ ವ್ಯವಸ್ಥಿತವಾಗಿ ಮೊದಲಿಗೆ ದಲಿತ ಸಾಹಿತ್ಯದ ರಚನೆ ಪ್ರಾರಂಭವಾಯಿತು. ಮರಾಠಿ ಭಾಷೆಯ ಲೇಖಕರು ಕಪ್ಪು ಸಾಹಿತ್ಯದಿಂದ ಪ್ರೇರಣೆ ಪಡೆದಿದ್ದರು. ಮೊದಲನೇ ಮಹಾಯುದ್ಧಕ್ಕಿಂತಲೂ ಮೊದಲೆ ಕಪ್ಪು ಜನರು ಅಕ್ಷರ ಜ್ಞಾನವನ್ನು ಹೊಂದಿದ್ದರು. ಈ ಕಾರಣಕ್ಕಾಗಿ ಅವರು ಅಲ್ಲಿನ ಸಾಹಿತ್ಯದ ಮೂಲಕ ತಮ್ಮ ಅಭಿವ್ಯಕ್ತಿಯನ್ನು ಪ್ರಾರಂಭಿಸಿದ್ದರು. ಇವರಲ್ಲಿ ಎಲ್ಲರೂ ಒಂದೇ ಸಾಂಸ್ಕೃತಿಕ ಪರಿಸರವನ್ನು ಹೊಂದಿದವರಾಗಿರಲಿಲ್ಲ. ಇವರು ಬೇರೆ ಬೇರೆ ಪ್ರಾದೇಶಿಕ ಹಿನ್ನಲೆಯಿಂದ ಬಂದವರಾಗಿದ್ದರು. ಅಮೇರಿಕಾದ ಕಪ್ಪು ಜನಾಂಗದವರ ಸಾಹಿತ್ಯ, ಆಫ್ರಿಕಾದ ಕಪ್ಪು ಜನರ ಸಾಹಿತ್ಯ ಮತ್ತು ಫ್ರೆಂಚ್

ಭಾಷೆಯ ಕಪ್ಪು ಜನಾಂಗದವರು ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು. ಇವರು ತಮ್ಮ ಕೃತಿಗಳಲ್ಲಿ ಆವರ ನಂಬಿಕೆ ಆಚರಣೆ ಹಾಗೂ ಆವರ ಪ್ರಾಚೀನತೆಯ ವೈಭವಗಳನ್ನು ದಾಖಲಿಸುವುದರ ಜೊತೆಗೆ ಅಂದಿನ ಪ್ರಭುತ್ವದಿಂದ ತಾವು ಅನುಭವಿಸುತ್ತಿದ್ದ ಶೋಷಣೆಯನ್ನು, ಅದರಿಂದ ವಿಮೋಚನೆ ಪಡೆಯಲು ತಾವು ತೆಗೆದುಕೊಳ್ಳಬೇಕಾದ ಎಚ್ಚರವನ್ನು ಅವರು ತಮ್ಮ ಸಾಹಿತ್ಯದಲ್ಲಿ ದಾಖಲಿಸುತ್ತಿದ್ದರು. ಇಷ್ಟೇ ಅಲ್ಲದೇ ಅವರು ತನ್ನ ಜಾನಪದ ಹಾಗೂ ಬುಡಕಟ್ಟುಗಳ ರೀತಿ–ನೀತಿಗಳನ್ನು ಸಹ ಸಾಹಿತ್ಯದ ಮೂಲಕ ಇತರ ಮೇಲ್ವರ್ಗದ ಜನರಿಗೆ ಪರಿಚಯಿಸಿದರು. ಇದೇ ಸಂದರ್ಭದಲ್ಲಿ ಇವರು ಬಿಳಿಯರ ದೌರ್ಜನ್ಯಗಳನ್ನು ಅವರ ಸಂಸ್ಕೃತಿಯನ್ನು ವಿಡಂಬಿಸಿ, ಬರೆಯ ತೊಡಗಿದರು. ಈ ಲೇಖಕರ ಪ್ರಭಾವಕ್ಕೆ ಒಳಗಾದ ಮರಾಠಿ ದಲಿತ ಸಾಹಿತ್ಯ ಚಿಂತಕರು ತಮ್ಮ ಐಕ್ಯತೆ ಮತ್ತು ಹೋರಾಟಗಳಿಗೆ ಪೂರಕವಾಗಿ ಬೇರೊಂದು ಸಾಹಿತ್ಯ ಮಾರ್ಗವನ್ನು ಕಂಡುಕೊಂಡಿತು. ದಲಿತರ ಅನುಭವಗಳ ಚಿತ್ರಣವೇ ಅಪರೂಪದ ವಸ್ತುವಾಗಿ ಅಂದಿನ ಸಂದರ್ಭದಲ್ಲಿ ಅಭಿವ್ಯಕ್ತಿವಾಗುತಿತ್ತು. ಇದು ಎಪ್ಪತ್ತರ ದಶಕದ ದಲಿತ ಚಿಂತಕರಿಗೆ ಒಂದು ಹೊಸ ಮಾರ್ಗವನ್ನು ತೆರೆಯಿತು ಇದರ ಪರಿಣಾಮದಿಂದಾಗಿ ಕನ್ನಡದ ಸಂದರ್ಭದಲ್ಲಿ ದಲಿತ ಸಾಹಿತ್ಯ ಉಗಮವಾಯಿತು.

ಕರ್ನಾಟಕದಲ್ಲಿ ಮೊದಲ ಬಾರಿಗೆ ದಲಿತರು ತಮ್ಮ ವಿರುದ್ಧ ನಡೆಯುತ್ತಿದ್ದ ದಬ್ಬಾಳಿಕೆ ದೌರ್ಜನ್ಯ, ಅಸಮಾನತೆ, ಇವುಗಳನ್ನು ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯವಾಗಿ ಎದುರಿಸಲು ಸಂಘಟಿತ ರೂಪದಲ್ಲಿ ಪ್ರಯತ್ನಿಸುತ್ತಿದ್ದರು. ಸ್ವಾತಂತ್ರ್ಯ ನಂತರದಲ್ಲಿ ದಲಿತರು ಮತ್ತು ಇತರ ಹಿಂದುಳಿದ ಜನಾಂಗಳಿಗೆ ಆಧುನಿಕ ಶಿಕ್ಷಣದ ಸೌಲಭ್ಯ ದೊರಕಿತು. ಇದು ಅವರಲ್ಲಿ ಪ್ರಜ್ಞೆಯನ್ನು ಮೂಡಿಸಿ, ಅವರು ಪ್ರಗತಿಪಥದತ್ತ ಚಲಿಸಲು ಇದು ಸಹಕಾರಿಯಾಯಿತು. ದಲಿತರು ಅಂದಿನವರೆಗೂ ಬದುಕುತ್ತಿದ್ದ ಬದುಕಿಗಿಂತ ಭಿನ್ನವಾಗಿ ಸ್ವಾಭಿಮಾನದಿಂದ ಬದುಕಬೇಕು ಎಂಬ ಅರಿವನ್ನು ಮೂಡಿಸಿಕೊಂಡರು. ಈ ನಿಟ್ಟಿನಲ್ಲಿ ಅವರ ಸಾಹಿತ್ಯ ಕೃಷಿ ನಡೆಯಿತು. ಇದಕ್ಕೆ ಮೂಲ ಪ್ರೇರಣೆ ಗಾಂಧೀಜಿ ಮತ್ತು ಅಂಬೇಡ್ಕರ್ ರವರ ವಿಚಾರ ಧಾರೆಗಳು ದಲಿತರನ್ನು ಪ್ರಭಾವಿಸಿದ್ದವು. ಸಂಪ್ರದಾಯ ವಿರೋಧಿ ಮತ್ತು ವ್ಯವಸ್ಥೆಯ ಮೇಲಿನ ಅಕ್ರೋಶದಿಂದ ಅಂಬೇಡ್ಕರ್ ವಿಚಾರಗಳು ಹೆಚ್ಚು ಜನಪ್ರಿಯವಾಗ ತೊಡಗಿದವು. ಅಂಬೇಡ್ಕರ್ ಸಿದ್ಧಾಂತದ ವ್ಯಾಪಕ ಚರ್ಚೆ ದಲಿತ ವಿದ್ಯಾವಂತ ಸಮೂದಾಯದ ಮಧ್ಯೆ ನಡೆಯುತ್ತಿತ್ತು. ದಲಿತರ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಅಂಬೇಡ್ಕರ್ ವಿಚಾರಗಳು ಪ್ರೇರಣೆ ನೀಡಿದವು. ಅಂಬೇಡ್ಕರ್ ಹಾಗೂ ಗಾಂಧೀಜಿ ವಿಚಾರಧಾರೆಗಳು ಲೋಹಿಯಾವಾದವು ಕನ್ನಡದ ಹೊಸ ತಲೆಮಾರಿನ ಲೇಖಕರ ಮೇಲೆ ಪ್ರಭಾವ ಬೀರಿತು ಸಮಾಜದ ಅಸಮಾನತೆಯ ಬಗ್ಗೆ ಅಸಮಧನ ಹೊಂದಿದ ಪ್ರಗತಿಪರ ಚಿಂತಕರು ಮೇಲಿನ ಎಲ್ಲಾ ಸಮಾಜ ಸುಧಾರಕರ ವಿಚಾರಗಳನ್ನು ತಮ್ಮ ಸಾಹಿತ್ಯದಲ್ಲಿ ದಾಖಲಿಸಲು ಪ್ರಯತ್ನಿಸಿದರು.

**೩. ೨ ದಲಿತ ಸಾಹಿತ್ಯದ ವ್ಯಾಖ್ಯೆ :** 'ದಲಿತ' ಎಂದರೆ ಯಾರು ಎಂಬುದರ ಬಗ್ಗೆ ದಲಿತ ಲೇಖಕರಲ್ಲಿ ಚರ್ಚೆ ನಡೆದಂತೆ "ದಲಿತ ಸಾಹಿತ್ಯ" ಎಂದರೆ ಏನು ಎಂಬ ಬಗ್ಗೆಯು ದೀರ್ಘವಾದ ಚರ್ಚೆ ನಡೆದಿದೆ. ಇದರಲ್ಲಿ ದಲಿತ ಸಾಹಿತಿಗಳಷ್ಟೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸದೆ ಕನ್ನಡ ಸಾಹಿತ್ಯದ ಇತರ ಪ್ರಗತಿಪರ ಚಿಂತಕರು ಸಹ ಈ ನೆಲೆಯಲ್ಲಿ ಯೋಚಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ರಹಮತ್ ತರೀಕೆರೆಯವರ ವ್ಯಾಖ್ಯೆ ಹೀಗಿದೆ. "ದಲಿತರ ಬಗ್ಗೆ ಇತರರು ಬರೆದುದು, ಅಥವಾ ದಲಿತರೇ ಸಾರ್ವಜನಿಕ ವಿಷಯಗಳ ಬಗ್ಗೆ ಬರೆದುದು ದಲಿತ ಸಾಹಿತ್ಯವಲ್ಲ. ದಲಿತರಾದವರು ತಮ್ಮ ರಕ್ತ ಮಾಂಸಗಳ ಜೀವಂತ ಅನುಭವ ಅನಿಸಿಕೆಯನ್ನು

ಹಿಡಿದಿಟ್ಟಿರುವುದು ಮಾತ್ರ ದಲಿತ ಸಾಹಿತ್ಯ. ಸಹಜವಾಗಿ ಈ ದೋರಣೆ ಪ್ರತಿಭಟನೆಯದು. ಸಮಾಜದ ಎಲ್ಲಾ ವರ್ಗದ ಜನರು ತಾವು ಅನುಭವಿಸುತ್ತಿರುವ ನೋವು-ಅಪಮಾನ ಅನ್ಯಾಯಗಳ ವಿರುದ್ಧ ಬಂಡೆದ್ದು. ಬರೆದುದು ಬಂಡಾಯ ಸಾಹಿತ್ಯ ದಲಿತ ಸಾಹಿತ್ಯಕ್ಕಿಂತ ಇದರ ವ್ಯಾಪ್ತಿ ಹಿರಿದು"೮ ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ.

ದಲಿತ ಸಾಹಿತ್ಯವನ್ನು ಕುರಿತು ದೇವನೂರ ಮಹದೇವರವರು ಈ ಕೆಳಗಿನ ಅಭಿಪ್ರಾಯವನ್ನು ಹೊಂದ್ದಾರೆ. ""ನಾನು ಅಂತ ಕತ್ತಲ ರಾಜ್ಯದಿಂದ ಬಂದಂಥವನು. ಕಲಾ ಮಾಧ್ಯಮದಲ್ಲಿ ನಾನು ಕಂಡುಕೊಳ್ಳುತ್ತಿರುವುದು ಒಂದು ಆಕಸ್ಮಿಕವೇ. ನಾನು ಇದುವರೆಗೆ ಬರೆದಿರುವುದನ್ನು ನಮ್ಮ ರಾಜ್ಯದ ಮನುಷ್ಯನ ಆರೇಳು ಬೆರಳುಗಳು, ಹೆಚ್ಚೆಂದರೆ ಒಂದು ಹಸ್ತ ಇದ್ದೀತು. ಅದಷ್ಟೇ ಕನ್ನಡ ಸಾಹಿತ್ಯದ ಗತಿಯನ್ನು ಅಲ್ಲಾಡಿಸುವಷ್ಟು ತನ್ನ ಪ್ರಮಾಣಕ್ಕಿಂತ ಹೆಚ್ಚಾಗಿ ಅಲ್ಲಾಡಿಸಿದೆ. ಒಂದೆರಡು ಬೆರಳು ಹಸ್ತಕ್ಕೆ ಇಷ್ಟವಾಗುವುದಾದರೆ ಕತ್ತಲ ರಾಜ್ಯದ ಇಡೀ ಮನುಷ್ಯ ಮಾತನಾಡುವುದಾದರೆ ಅದರಿಂದ ಉಂಟಾಗುವ ಬದಲಾವಣೆಯು ತನ್ನ ಕಲ್ಪನೆಗೆ ಎಟುಕದಷ್ಟಾಗಬಹುದು. ಆ ಬದಲಾವಣೆಗೆ ಈ ಮನುಷ್ಯನ ನುಡಿಗೆ ನುಡಿಕೊಡಲು ನೂರಾರು ಜನರು ಹುಟ್ಟಬೇಕಾದೀತು. ಒಂದು ಆಂದೋಲನ ಇದನ್ನು ಕಾಣಿಸಬಹುದೆನೋ" ೯ ಎಂಬ ಅಭಿಪ್ರಾಯದಲ್ಲಿ ದಲಿತ ಸಮುದಾಯದ ನೋವು-ನಲಿವುಗಳನ್ನು ದಲಿತೇತರರು ಸಹ ದಾಖಲಿಸಬಹುದು. ಎಂಬ ಆಶಯ ಇರುವುದನ್ನು ನೋಡಬಹುದು.

"ಒಬ್ಬ ಅವಮಾನಿತ ವ್ಯಕ್ತಿ ಸ್ವಾಭಿಮಾನಿಯೂ ಆದಾಗ ಹುಟ್ಟುವ ಸಾಹಿತ್ಯಕ್ಕೆ ಒಂದು ಗುಣವಿರುತ್ತದೆ. ಅದನ್ನು ನಾವು ಪ್ರಪಂಚದ ಎಲ್ಲಾ ಕಡೆಯು ಪ್ರತಿಭಟನಾ ಸಾಹಿತ್ಯವೆಂದು ಕಾಣುತ್ತೇವೆ. ಹೀಗೆ ಅವಮಾನಿತ ಸ್ವಾಭಿಮಾನಿಯಾದವನು ಅಸ್ಪೃಶ್ಯನು ಆಗಿದ್ದಲ್ಲಿ ನಮ್ಮ ದಲಿತ ಸಾಹಿತ್ಯ ಹುಟ್ಟಿ ಬರುತ್ತದೆ."(ಯು. ಆರ್. ಅನಂತಮೂರ್ತಿ : ೧೯೮೮ : ೧೩) ಎಂಬ ಅಭಿಪ್ರಾಯವನ್ನು ಯು. ಆರ್. ಅನಂತಮೂರ್ತಿಯವರು ವ್ಯಕ್ತಪಡಿಸಿದ್ದಾರೆ.

ಸಿ. ವೀರಣ್ಣನವರು "ಎಲ್ಲಾ ಜಾತಿಗಳಲ್ಲಿಯೂ ತುಳಿತಕ್ಕೊಳಗಾಗಿರುವವರನ್ನೆಲ್ಲಾ ದಲಿತರು ಎಂದು ಕರೆದು 'ದಲಿತ' ಪದದ ವ್ಯಾಪ್ತಿಯನ್ನು ವಿಸ್ತರಿಸವುದಕ್ಕಿಂತ ಈಗ ಅದು ಹುಟ್ಟಿ ಬೆಳೆದಿರುವ ಹಿನ್ನಲೆಯಲ್ಲಿ ಅದನ್ನು ಅಸ್ಪಶ್ಯ ಜನಾಂಗಕ್ಕೆ ಸೀಮಿತಗೊಳಿಸುವುದು ಚಾರಿತ್ರಿಕ ಅಧ್ಯಯನದ ದೃಷ್ಟಿಯಿಂದ ಸೂಕ್ತವೆನಿಸುತ್ತದೆ. ಹೀಗೆ ಮಾಡಿದರೆ ಕಲಸು ಮೇಲೋಗರವಾಗುವುದು ತಪ್ಪುತ್ತದೆಯಲ್ಲದೆ. ಜಾತಿಯ ದೃಷ್ಟಿಯಿಂದಲೇ ಸಾಹಿತ್ಯವನ್ನು ಅಭ್ಯಾಸ ಮಾಡುವ ಸಾಂಪ್ರದಾಯಿಕ ನೋಟವೊಂದಕ್ಕೆ ದಲಿತ ಸಾಹಿತ್ಯವೆನ್ನುವುದು ಸಮೀಪವಾಗುತ್ತದೆ. ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ಮುಂದುವರೆದು..... "ಅನುಭವದ ಗ್ರಹಿಕೆ ಬೇರೆಯವರಿಗೆ ಇರಬಾರದು ಎಂದಿಲ್ಲಾ. ಕೂಡಿ ಬದುಕುತ್ತಿರುವ ಸಮಾಜವನ್ನು ಚಿತ್ರಿಸುವ ಲೇಖಕನಿಗೆ ಎಲ್ಲ ಮಗ್ಗುಲುಗಳ ಗ್ರಹಿಕೆಯು ಅಗತ್ಯವಾಗುತ್ತದೆ. ಇಲ್ಲಾವಾದರೆ ದಲಿತನೊಬ್ಬ ತನ್ನದಲ್ಲದ ಜಾತಿಯ ಕುರಿತು ಹೇಳುವುದು. ಹಾಗೆಯೇ ಸವರ್ಣೀಯನೊಬ್ಬ ದಲಿತನನ್ನು ಕುರಿತು ಚಿತ್ರಿಸುವುದು ಸಾಧ್ಯವಾಗದ ಸಾಹಿತ್ಯ ಸೃಷ್ಟಿಯಾಗಬೇಕಾಗುತ್ತದೆ. ಇವರಿಬ್ಬರೂ ಹೆಂಗಸರನ್ನು ಕುರಿತು ಮಾತನಾಡಬಾರದೆಂದು ಹೇಳಿದಂತಾಗುತ್ತದೆ".೧೦ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿ ದಲಿತ ಸಾಹಿತ್ಯದಲ್ಲಿ ಬೇರೆಯವರು ಸಹ ತಮ್ಮ ಪ್ರತಿಭೆಯನ್ನು ತೋರಬಹುದು ಎಂಬ ಆಶಯವನ್ನು ಹೊಂದಿದ್ದಾರೆ.

ಬರಗೂರು ರಾಮಚಂದ್ರಪ್ಪನವರು ದಲಿತ ಸಾಹಿತ್ಯವನ್ನು ಕುರಿತು ಹೀಗೆ ವಿವರಿಸಿದ್ದಾರೆ. "ಸಾಹಿತ್ಯದ ' ಮಟ್ಟಿಗೆ ಕೃತಿಯೊಂದರ ಅನುಭವ ಪ್ರಾಮಾಣ್ಯದ ಆಧಾರದಿಂದ, ಹುಟ್ಟಿನಿಂದ ದಲಿತರಾದವರು ಸೃಷ್ಟಿಸಿದ ಪ್ರಗತಿಪರ ಸಾಹಿತ್ಯವನ್ನು ದಲಿತ ಸಾಹಿತ್ಯವೆಂದು ಪರಿಗಣಿಸಬಹುದು. ಇದರರ್ಥ ಬೇರೆಯವರು ದಲಿತರ ಬಗ್ಗೆ ಬರೆದದ್ದು ಅಪ್ರಮಾಣಿಕ ಆಶಯಗಳಿಂದ ಕೂಡಿದೆ ಎಂದೇನೂ ಅಲ್ಲ. ಹುಟ್ಟಿನಿಂದಲೇ ದಲಿತನಾದವನ ಅಪ್ಪಟ ಅನುಭವ ಉಳಿದವರ ಅನುಭವಕ್ಕಿಂತ ಹೆಚ್ಚು ತೀವ್ರವಾದದ್ದು. ರಕ್ತಮಾಂಸಗಳೊಂದಿಗೆ ಬೆರೆತ ಸಾಚಾ ಸ್ವರೂಪದ್ದು ಎಂದಷ್ಟೇ ಇದರರ್ಥ. ಈ ನೆಲೆಯಲ್ಲಿ ಪ್ರಗತಿಪರ ಆಶಯಗಳು ಅಚ್ಚೊತ್ತಿದ ದಲಿತ ಸಾಹಿತ್ಯ, ಬಂಡಾಯ ಸಾಹಿತ್ಯದ ಭಾಗವೇ

ಆಗುತ್ತದೆ. ಏಕೆಂದರೆ ಪ್ರಗತಿಪರ ಆಶಯಗಳನ್ನು ಸ್ಫೋಟಿಸುವ ಯಾರೇ ಆದರೂ ಬಂಡಾಯ ಸಾಹಿತಿಗಳಾಗುತ್ತಾರೆ. ಬಂಡಾಯ ಸಾಹಿತ್ಯ ಚಳುವಳಿಯು ಹುಟ್ಟಿನಿಂದ ದಲಿತರು ಮತ್ತು ದಲಿತೇತರರು ಹೊಸ ಸಾಂಸ್ಕೃತಿಯ ಹೋರಾಟಕ್ಕಾಗಿ ಒಗ್ಗೂಡಿದ ವೇದಿಕೆ"೧೧ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಬರಗೂರು ರಾಯಚಂದ್ರಪ್ಪನವರ ಮೇಲಿನ ಹೇಳಿಕೆಯನ್ನು ಪೂರ್ಣವಾಗಿ ಒಪ್ಪಲು ಸಾಧ್ಯವಿಲ್ಲ ಏಕೆಂದರೆ ದಲಿತ ಸಾಹಿತ್ಯದ ಕೃತಿಗಳಲ್ಲಿ ದೇವನೂರ ಮಹಾದೇವ ಹಾಗೂ ಅರವಿಂದ ಮಾಲಗತ್ತಿಯವರ ಬರವಣಿಗೆಗಳಿಗೂ ಬಂಡಾಯ ಸಾಹಿತ್ಯದ ಬರವಣಿಗೆಗಳಿಗೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ಮೇಲಿನ ಹೇಳಿಕೆಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ದಲಿತ ಸಾಹಿತ್ಯದಲ್ಲಿ ದಲಿತರ ಜೀವನ ಚಿತ್ರಣವನ್ನು ನೀಡುವ ಸಂದರ್ಭದಲ್ಲಿ ದೇವನೂರ ಮಹಾದೇವರ ನಿರ್ಲಿಪ್ತ ವಿವರಣೆಗಳು ಬಂಡಾಯ ಸಾಹಿತ್ಯದಲ್ಲಿ ಸಿಗುವುದಿಲ್ಲ. ಬರಗೂರು ರಾಮಚಂದ್ರಪ್ಪನವರು ಸಿ. ವೀರಣ್ಣ ಅವರ ಅಭಿಪ್ರಾಯವನ್ನು ಸಮರ್ಥಿಸಿರುವುದು ಕಂಡುಬರುತ್ತದೆ. ಮೇಲಿನ ಹೇಳಿಕೆಗೆ ಮಹಾರಾಷ್ಟ್ರದ ದಲಿತ ಪ್ಯಾಂಥರ್‌ನ ಪ್ರಭಾವವಿರುವುದನ್ನು ಗಮನಿಸಬಹುದು.

ಮರಾಠಿ ದಲಿತ ಸಾಹಿತಿ ಪ್ರೊ : ಲೋಖಂಡೆಯವರು "ಶೋಷಣೆ ಮತ್ತು ದಬ್ಬಾಳಿಕೆಯನ್ನು ಖಂಡಿಸಿ ಬರೆಯುವ ಎಲ್ಲಾ ಸಾಹಿತ್ಯ ದಲಿತ ಸಾಹಿತ್ಯವೇ ". ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾರೆ. ಇದೇ ಅಭಿಪ್ರಾಯವನ್ನು ಮಹಾರಾಷ್ಟ್ರದ ದಲಿತ ಗಂಗಾಧರ ಪಟವಾಣಿಯವರು ವ್ಯಕ್ತ ಪಡಿಸಿದ್ದಾರೆ. ಅವರ ಅಭಿಪ್ರಾಯ ಈ ಕೆಳಗಿನಂತಿದೆ.

ಗಂಗಾಧರ ಪಟವಾಣಿಯವರು ದಲಿತ ಸಾಹಿತ್ಯವನ್ನು ಹೀಗೆ ವ್ಯಖ್ಯಾನಿಸುತ್ತಾರೆ. "ನನಗೆ ದಲಿತ ಎನ್ನುವುದು. ಒಂದು ಜಾತಿ ಅಷ್ಟೇ ಅಲ್ಲ. ಈ ದೇಶದ ಸಂಪ್ರಾದಯ ಚೌಕಟ್ಟಿನಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೋಷಿಸಲಾಗಿರುವವನು ಇವನಿಗೆ ಈ ದೇಶದ ರಕ್ತದಲ್ಲಿ ತುಂಬಿಕೊಂಡಿರುವ ದೇವರು-ಧರ್ಮ, ಪುನರ್ ಜನ್ಮ ಪವಿತ್ರ ಗ್ರಂಥಗಳು, ಸ್ವರ್ಗ-ನರಕ ಮುಂತಾದವುಗಳಲ್ಲಿ ನಂಬಿಕೆಯಿಲ್ಲ. ಯಾಕೆಂದರೆ ಅವುಗಳಲ್ಲಾ ಇವವನ್ನು ಗುಲಾಮನನ್ನಾಗಿ ಮಾಡಿರುವಂತಹವು. ಮಾನವೀಯತೆಯಲ್ಲಿ ಇವನಿಗೆ ನಂಬಿಕೆ ಇದೆ. ಬದಲಾವಣೆಯ ಮತ್ತು ಕ್ರಾಂತಿಯ ನಿಜವಾದ ಸಂಕೇತವೇ ಈ ಹೊತ್ತಿನ ದಲಿತ "೧೨ ಎಂಬ ಅಭಿಪ್ರಾಯ ವ್ಯಕ್ತ ಪಡಿಸಿಸಿದ್ದಾರೆ. ಇದು ಮಹಾರಾಷ್ಟ್ರದಲ್ಲಿ ದಲಿತ ಸಾಹಿತ್ಯವೆಂದರೆ ಯಾವ ಮುಲಾಜು ಇಲ್ಲದೇ ಅಸ್ಪೃಶ್ಯತೆಯ ಅನುಭವವುಳ್ಳವರು ಮಾತ್ರ. ಪ್ರಗತಿಪರವಾಗಿ ಸೃಷ್ಟಿಸಿದಂತಾ ಸಾಹಿತ್ಯವಾಗುವುದು ಎಂಬುದಾಗಿ ದೇವಯ್ಯ ಹರವೆಯವರು ತಮ್ಮ ದಲಿತ ಸಾಹಿತ್ಯ ಕೆಲವು ತಾತ್ವಿಕ ಚಿಂತನೆಗಳು ಎಂಬ ಲೇಖನದಲ್ಲಿ ಹೇಳಿದ್ದಾರೆ.

ಮೇಲಿನ ಎಲ್ಲಾ ವ್ಯಾಖ್ಯೆಗಳನ್ನು ಗಮನಿಸಿದಾಗ ದಲಿತ ಸಾಹಿತ್ಯವೆಂದರೆ ವೈಧಿಕ ಶಾಹಿ ನಿರ್ಮಾಣ ಮಾಡಿದ್ದ ಅಥವಾ ಸ್ಥಾಪಿಸಿದ್ದ ವರ್ಗ-ವರ್ಣ ವ್ಯವಸ್ಥೆಯ ಕಾರಣದಿಂದಾಗಿ ಸಮಾಜದ ಅತ್ಯಂತ ಕೆಳ ಸಮುದಾಯಗಳು ತುಳಿತಕ್ಕೆ, ಹಿಂಸೆಗೆ ಹಾಗೂ ಅಸ್ಪೃಶ್ಯರೆಂಬ ಅನಿಷ್ಟಕ್ಕೆ ಒಳಗಾದ ಜನರು ತಮ್ಮ ಬದುಕಿನ ಬಗ್ಗೆ ಅಲ್ಲಿನ ನೋವು ನಲಿವುಗಳ ಬಗ್ಗೆ ಸಾಹಿತ್ಯದ ಪ್ರಗತಿಪರ ಬರವಣಿಗೆಯನ್ನು ದಲಿತ ಸಾಹಿತ್ಯ ಎಂದು ಕರೆಯಬಹುದಾಗಿದೆ. ಇದನ್ನು ದಲಿತರೆ ಬರೆಯಬೇಕೆಂದೇನೂ ಇಲ್ಲ. ದಲಿತರು ಬರೆದರೆ ಹೆಚ್ಚು ವಾಸ್ತವದಿಂದ ಕೂಡಿರುತ್ತದೆ. ಎಂಬುದು ಒಂದು ನಂಬಿಕೆ. ಈ ಕಾರಣಕ್ಕಾಗಿ ಹಲವು ದಲಿತ ಚಿಂತಕರು ದಲಿತರು ಬರೆದ ಸಾಹಿತ್ಯ ಮಾತ್ರ ದಲಿತ ಸಾಹಿತ್ಯ ಎಂಬ ವಾದವನ್ನು ನಂಬುತ್ತಾರೆ. ದಲಿತ ಸಾಹಿತ್ಯ ಮನುಷ್ಯನನ್ನು ಕೇಂದ್ರ ಬಿಂದುವಾಗಿ ಪರಿಗಣಿಸಿ ಆತನ ದಯಾನೀಯ ಸಾಮಾಜಿಕ ಸ್ಥಿತಿಯನ್ನು ಚಿತ್ರಿಸುತ್ತದೆ. ಇದು ಮನುಷ್ಯ-ಮನುಷ್ಯರ ನಡುವಿನ ಅಂತರವನ್ನು ಕಡಿಮೆ ಮಾಡುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ ಸಾಹಿತ್ಯ ಒಂದು ವಿಶಿಷ್ಟ ರೂಪವನ್ನು ಪಡೆದುಕೊಂಡು ಬೆಳೆದು ಬಂದಿದೆ. ಕನ್ನಡ ಸಾಹಿತ್ಯದಲ್ಲಿ ದಲಿತ ಸಾಹಿತ್ಯವು ದಲಿತ ಚಳುವಳಿಯೊಂದಿಗೆ ಆರಂಭವಾಯಿತು. ಇದಕ್ಕೆ ಹಾವನೂರರ ವರದಿ ಹಾಗೂ ಬಸವಲಿಂಗಪ್ಪನವರ ಘಟನೆ ಕಾರಣವಾಯಿತು. ಇಷ್ಟೇ ಅಲ್ಲದೇ ಪೆರಿಯಾರ್ ಅವರು ಧಾರ್ಮಿಕ ವಿಚಾರಗಳು ಬಗ್ಗೆ ಹೊಂದಿದ್ದು ತಿರಸ್ಕಾರವು ದಲಿತ ಸಾಹಿತ್ಯಕ್ಕೆ ಕಾರಣವಾಯಿತು. ಕನ್ನಡ ಸಾಹಿತ್ಯದಲ್ಲಿ ಮೊದಲ ದಲಿತ ಸಾಹಿತ್ಯ ಕೃತಿ ದೇವನೂರ ಮಹಾದೇವ ಅವರ 'ದ್ಯಾವನೂರು' ಕಥಾ ಸಂಕಲನ. ಅದು ೧೯೭೩ರಲ್ಲಿ ಪ್ರಕಟವಾಯಿತು. ನಂತರ ಸಿದ್ದಲಿಂಗಯ್ಯನವರ 'ಹೊಲೆಮಾದಿಗರ ಹಾಡು' ೧೯೭೫ರಲ್ಲಿ ಪ್ರಕಟವಾದವು. ಈ ಕೃತಿಗಳ ಯಶಸ್ಸು ದಲಿತ ಲೇಖಕರು ಇನ್ನಷ್ಟು ಬರೆಯುವಂತೆ ಪ್ರೇರೇಪಿಸಿತು.

ಭೂ ಸುಧಾರಣಾ ಕಾನೂನಿನಿಂದ ಅಲ್ಲಿಯವರೆಗೆ ಕೃಷಿ ಕೂಲಿಗಳಾಗಿದ್ದ ಕೆಳ ಜಾತಿ, ಕೆಳವರ್ಗದ ಜನರಿಗೆ ಭೂ ಒಡೆತನ ಸಿಕ್ಕಿತು. ಇದರಿಂದ ದಲಿತರು ಸ್ವಾಭಿಮಾನಿಗಳಾಗಿ ಬದುಕಲು ಸಾಧ್ಯವಾಯಿತು. ಅಸಂಖ್ಯಾತ ಗೇಣಿದಾರರು, ಜೀತದಾಳುಗಳು ಕೃಷಿಕರಾಗಿ ತಮ್ಮ ಬದುಕನ್ನು ಬದಲಾಯಿಸಿಕೊಂಡರು. ಈ ಸಂದರ್ಭದಲ್ಲಿ ಸಾಹಿತ್ಯಕ್ಕೂ ಜನತೆಗೂ ನಿಕಟವಾದ ಸಂಬಂಧವೇರ್ಪಟ್ಟಿತು. ಜನರು ಬಿಡುವಿನ ವೇಳೆಯಲ್ಲಿ ತಮ್ಮ ಸ್ಥಿತಿಗತಿಯ ಬಗ್ಗೆ ಚಿಂತಿಸುವಂತಾದರು. ಓದು ಬರಹ ಬಲ್ಲ ವಿದ್ಯಾವಂತರು ಸಾಹಿತ್ಯದಿಂದ ಸಾಮಾಜಿಕ ಎಚ್ಚರವನ್ನು ಪಡೆಯಲು ಸಾಧ್ಯವಾಯಿತು.

ದಲಿತ ಸಾಹಿತ್ಯವೆಂದರೆ ಅದು ಪ್ರತೀಕಾರದ ಸಾಹಿತ್ಯ ಎಂದು ಹಲವರು ನಂಬಿದ್ದಾರೆ. ಆದರೆ ಅದರ ಗುರಿ ಪ್ರತೀಕಾರವಾಗಿರದೆ ದಲಿತನೊಬ್ಬನ ಬಾಲ್ಯದ ಅನುಭವ, ತನ್ನ ದೈನಂದಿನ ಬದುಕಿನ ಸಾಮಾಜಿಕ ಜವಾಬ್ದಾರಿಗಳು, ಆತನ ನೋವು-ಸಂಕಟಗಳು ಇವುಗಳನ್ನು ದಾಖಲಿಸುವುದು. ಹಾಗೆಯೇ ತನ್ನ ಸಮಸ್ಯೆಗಳನ್ನು ಸಾರ್ವಜನಿಕವಾಗಿ ತೆರೆದಿಡುವುದು ದಲಿತ ಸಾಹಿತ್ಯದ ಪ್ರಮುಖ ಆಶಯವಾಗಿದೆ. ತನ್ನ ಜನಾಂಗದವರಲ್ಲಿ ಪ್ರಜ್ಞೆ ಮೂಡಿಸುವುದು. ಜನಾಂಗವನ್ನು ಸಂಘಟಿಸುವುದು ದಲಿತ ಲೇಖಕನ ಕರ್ತವ್ಯವಾಗಿರುತ್ತದೆ. ಸಮುದಾಯದ ಭಾಷೆ, ರಾಜಕೀಯ, ಜಾತೀಯತೆ ಮುಂತಾದ ಸಮಸ್ಯೆಗಳ ಬಗ್ಗೆ ಆಳವಾಗಿ ಚಿಂತಿಸಿ ಅದಕ್ಕೆ ಪರಿಹಾರಗಳನ್ನು ಹುಡುಕಿ ಅದರಿಂದ ಕಂಡುಕೊಂಡ ಫಲಿತಾಂಶವನ್ನು ಸಮಾಜಕ್ಕೆ ನಿವೇದಿಸುವ ಗುರಿಯನ್ನು ದಲಿತ ಸಾಹಿತ್ಯ ಹೊಂದಿರುತ್ತದೆ.

'ದಲಿತ ಪದವನ್ನು 'ದಲಿತ ಸಾಹಿತ್ಯ'ವನ್ನು ಕೇವಲ ಅಸ್ಪೃಶ್ಯತೆಯನ್ನು ಅನುಭವಿಸಿದ ಜನಾಂಗಕ್ಕೆ ಮಾತ್ರ ಅಸ್ವಹಿಸುವುದರ ಬಗ್ಗೆ ಭಿನ್ನಭಿಪ್ರಾಯಗಳಿವೆ. ಹಾಗೆಯೇ ದಲಿತ ಸಾಹಿತ್ಯವನ್ನು ದಲಿತರ ಅನುಭವಗಳನ್ನು ದಲಿತರು ಮಾತ್ರ ದಾಖಲಿಸಬೇಕೆ ? ಅಥವಾ ಅದನ್ನು ಸವರ್ಣೀಯರು ದಾಖಲಿಸಬಹುದೆ. ಎಂಬ ವಿಚಾರದ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ.

**೩. ೩ ಕನ್ನಡ ಸಾಹಿತ್ಯದಲ್ಲಿ ಅಥೆಂಟಿಸಿಟಿಯ ಪ್ರಶ್ನೆ** : 'ದಲಿತ' ಮತ್ತು 'ದಲಿತ ಸಾಹಿತ್ಯ' ವನ್ನು ಕುರಿತಂತೆ ಅನೇಕ ವ್ಯಾಖ್ಯಾನಗಳು, ಹೇಳಿಕೆಗಳು ವಿದ್ವಾಂಸರಿಂದ ಹೊರಬಿದ್ದಿವೆ. ಆದರೆ ಈ ವ್ಯಾಖ್ಯಾನಗಳು "ದಲಿತ" ಪದದ ಅರ್ಥ ಹಾಗೆಯೇ "ದಲಿತ ಸಾಹಿತ್ಯ" ಎಂದರೆ ಏನು ಎಂಬ ಸ್ಪಷ್ಟವಾದ ತೀರ್ಮಾನಗಳನ್ನು ತೆಗೆದುಕೊಳ್ಳಲು ವಿಫಲರಾಗಿದ್ದಾರೆ. ಏಕೆಂದರೆ ಆಧುನಿಕ ಸಾಹಿತ್ಯದ ಸಂದರ್ಭ ವೈಚಾರಿಕತೆಗಳ ತಾಕಲಾಟದ ಸಂದರ್ಭ. ಇಲ್ಲಿ ಅಕ್ಷರ ಕಲಿತ ದಲಿತರು ಮತ್ತು ದಲಿತೇತರ ಸಮುದಾಯಗಳ ಮಧ್ಯೆ ದಲಿತ ಸಾಹಿತ್ಯವನ್ನು ಕುರಿತಾದ ಅನೇಕ ಭಿನ್ನಭಿಪ್ರಾಯಗಳಿವೆ. ದಲಿತ ಲೇಖಕರು ಬರೆದದ್ದು ಮಾತ್ರ ದಲಿತ ಸಾಹಿತ್ಯವೇ ? ದಲಿತೇತರರು ಬರೆದದ್ದು ದಲಿತ ಸಾಹಿತ್ಯವಾಗುವುದಿಲ್ಲ ಏಕೆ ?

ಎಂಬ ವಿಷಯಗಳ ಮಧ್ಯೆ ಅನೇಕ ವಾದಗಳು ಏರ್ಪಟ್ಟಿವೆ. ದಲಿತರೇ ದಲಿತರನ್ನು ಕುರಿತು ಬರೆದದ್ದು ಮಾತ್ರ ದಲಿತ ಸಾಹಿತ್ಯ ಎಂದು ಒಂದು ಗುಂಪಿನ ಸಾಹಿತಿಗಳು ವಾದಿಸಿದರೆ, ಮತ್ತೊಂದು ಗುಂಪಿನ ಸಾಹಿತಿಗಳು ದಲಿತೇತರರು ದಲಿತ ಪ್ರಜ್ಞೆಯಿಂದ ದಲಿತರ ಬಗ್ಗೆ ಬರೆದಿರುವುದು ಸಹ ದಲಿತ ಸಾಹಿತ್ಯವೇ ಎಂದು ವಾದಿಸುತ್ತಾರೆ. ಈ ವಾದಗಳನ್ನು ಕುರಿತು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸುಧೀರ್ಘ ಚರ್ಚೆ ನಡೆಯುತ್ತಿದೆ.

ಭಾರತದಂತಹ ದೇಶದಲ್ಲಿ ಜಾತಿಪದ್ದತಿ, ಜಾತಿ ಸಮಸ್ಯೆಗಳು ಅನಾದಿಕಾಲದಿಂದಲೂ ಆಚರಣೆಯಲ್ಲವೆ. ಆಧುನಿಕ ಸಂದರ್ಭದಲ್ಲಿಯು ಇದರ ಪ್ರಭಾವ ಕಡಿಮೆಯಾಗಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಯಾವುದೋ ಒಂದು ಜಾತಿಗೆ ಸೇರಿದ ಲೇಖಕ ಮತ್ತೊಂದು ಜಾತಿಯವರನ್ನು ಕುರಿತು ಬರೆಯುವಾಗ, ಅವನು ಚಿತ್ರಿಸಿದ ಮತ್ತೊಂದು ಜಾತಿಯ ಬದುಕು ನೈಜವಾಗಿದೆಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಏಕೆಂದರೆ ಜಾತಿಗಳು ಅವನ ಸಾಮಾಜಿಕ ನಡವಳಿಕೆಯನ್ನು ಪ್ರತ್ಯೇಕಿಸುವುದರಿಂದ ಈ ಸಮಸ್ಯೆ ಎದುರಾಗುತ್ತದೆ. ಇಂಥ ಸಂದರ್ಭದಲ್ಲಿ ಲೇಖಕನ ಸಾಹಿತ್ಯದ ಪ್ರಾಮಾಣಿಕತೆಯ ಬಗ್ಗೆ ಪ್ರಶ್ನೆ ಎಳುತ್ತದೆ. ದಲಿತೇತರ ಲೇಖಕನು ದಲಿತ ಸಮಸ್ಯೆಯನ್ನು ಕುರಿತು ಬರೆದಾಗ ಸಾಹಿತ್ಯದಲ್ಲಿ ಪ್ರಾಮಾಣಿಕವಾಗಿ ಸಮಗ್ರ ದಲಿತ ಚಿತ್ರಣವನ್ನು ಚಿತ್ರಿಸಿರುತ್ತಾನೆಯೇ ಎಂಬ ವಿಚಾರವನ್ನು ಕನ್ನಡ ಎರಡು ಕಾದಂಬರಿಗಳನ್ನು ಉದಾಹರಣೆಗಳಾಗಿ ತೆಗೆದುಕೊಂಡು ನೋಡಬಹುದು. ಇದಕ್ಕೆ ಕಾರಂತರ 'ಚೋಮನ ದುಡಿ' ಹಾಗೂ ಎಸ್. ಎಲ್. ಭೈರಪ್ಪನವರ 'ದಾಟು' ಕಾದಂಬರಿಯನ್ನು ನೋಡಬಹುದು.

ಕಾರಂತರ 'ಚೋಮನ ದುಡಿ' ಕಾದಂಬರಿಯು ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಪಾತ್ರವನ್ನು ಒಳಗೊಂಡ ಪ್ರಥಮ ಕೃತಿ. ಇಲ್ಲಿ ಕಾರಂತರು ದಲಿತರ ಬದುಕಿನ ನೋವು, ಸಾಮಾಜಿಕ ಸಂಕೋಲೆಗಳು, ಜಾತಿಯತೆಯ ಸಮಸ್ಯೆಗಳು, ಹೀಗೆ ದಲಿತ ಸಮಸ್ಯೆಗಳನ್ನು ಕುರಿತು ಚರ್ಚಿಸಿದ್ದಾರೆ. ಇದರಲ್ಲಿ ದಲಿತ ಪಾತ್ರಗಳನ್ನು ತುಂಬಾ ಮಾನವೀಯ ನೆಲೆಯಲ್ಲಿ ಪ್ರಜ್ಞಾ ಪೂರ್ವಕವಾಗಿ ಚಿತ್ರಿಸಿದ್ದಾರೆ. ಆದರೂ ಈ ಕಾದಂಬರಿ ದಲಿತ ದೃಷ್ಟಿಯಿಂದ ಸೋಲುತ್ತದೆ. ಏಕೆಂದರೆ ಕಾರಂತರ ಚೋಮ ಸ್ವಂತ ಬೇಸಾಯ ಮಾಡಿ ಸ್ವಾಭಿಮಾನದಿಂದ ಬದುಕಬೇಕು ಎಂಬ ಹಂಬಲ ಇಟ್ಟುಕೊಂಡಿದ್ದಾನೆ. ಇದು ಕಾರಂತರ ದಲಿತಪರ ಚಿಂತನೆಯನ್ನು ತಿಳಿಸುತ್ತದೆ. ಆದರೆ ಆತನ ಆಸೆ ಕಾದಂಬರಿಯಲ್ಲಿ ಈಡೇರದೆ ಹತಾಶನಾಗಿ ಸಾಯುತ್ತಾನೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದುದು ಜಾತಿಗೆ ಪ್ರಾಧಾನ್ಯತೆ ಇರುವ ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ದಲಿತನಾದವನೊಬ್ಬ ತನ್ನ ಕನಿಷ್ಠ ಆಸೆಯನ್ನು ಈಡೇರಿಸಿಕೊಳ್ಳಲಾಗದ ಪರಿಸ್ಥಿತಿಯನ್ನು ಮೂಲಭೂತವಾದಿಗಳು ನಿರ್ಮಿಸಿರುವುದು. ಇದೇ ಕಾದಂಬರಿಯಲ್ಲಿ ಕಾರಂತರು ಕ್ರೈಸ್ತ ಧರ್ಮದ ಮಾನವೀನತೆಯ ನೆಲೆಗಳ ಬಗ್ಗೆ ಅದು ದಲಿತ ಸಮಾಜದ ಜನರನ್ನು ಕಾಣುವ ರೀತಿಯ ಬಗ್ಗೆ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಚೋಮನ ಮಗ 'ಗುರುವ' ಬೇಸಾಯಗಾರನಾಗುವುದು ತನ್ನ ಮೂಲ ಜಾತಿಯನ್ನು ತ್ಯಜಿಸಿದ ಮೇಲೆಯೇ. ಹೀಗೆ ಕಾರಂತರು ಎರಡು ಧರ್ಮಗಳ ನಡುವಿನ ಭಿನ್ನತೆಗಳನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸುತ್ತಾರೆ. ದಲಿತರ ಕಷ್ಟವನ್ನು ಅವರ ಧಾರುಣ ಚಿತ್ರವನ್ನು ಸಾಮಾಜಿಕ ದಬ್ಬಾಳಿಕೆಯನ್ನು ಮಮ್ಮಲ ಮರುಗುವಂತೆ ಕಾರಂತರು ವರ್ಣಿಸಿ, ವಾಚಕರ ಸಹಾನುಭೂತಿಯನ್ನು ಗಳಿಸುತ್ತಾರೆ. ಈ ನಿಟ್ಟಿನಲ್ಲಿ ಚೋಮನ ಪಾತ್ರ ಯಶಸ್ವಿಯಾಗಿದೆ. ಆದರೆ 'ಗಾಣಿಗಿತ್ತಿ ಅಯ್ಯೋ ಎಂದರೆ ಮಗುವಿನ ನೆತ್ತಿ ತಣ್ಣಗಾದೀತೆ ?' ಎಂಬ ಹೇಳಿಕೆಯಂತೆ ದಲಿತರಿಗೆ ಬೇಕಾಗಿರುವುದು ಸಹಾನುಭೂತಿಯಲ್ಲ ಸ್ವಾತಂತ್ರ್ಯ, ಆರ್ಥಿಕ ಭದ್ರತೆ ಮತ್ತು ಜಾತೀಯತೆಯಿಂದ ಮುಕ್ತಿ. ಇವುಗಳಿದ್ದರೆ. ದಲಿತನಾದವನೊಬ್ಬ ಸಮಾಜದಲ್ಲಿ

ಸುಧಾರಿತ ಜೀವನ ನಡೆಸಬಹುದು. ಈ ದೃಷ್ಟಿಯಿಂದ 'ಚೋಮನ'ನ್ನು ಕಾರಂತರು ಚಿತ್ರಿಸಬೇಕಿತ್ತು. ಆದರೆ ಕಾರಂತರು ಈ ಕಾದಂಬರಿಯಲ್ಲಿ ದಲಿತ ಪರ ಆಶಯ ಪೂರ್ಣಮಟ್ಟದ ಗುರಿಯನ್ನು ತಲುಪಿಲ್ಲ. ಕಾರಂತರು ತಮ್ಮ ಇತರ ಸೃಜನಶೀಲ ಕೃತಿಗಳಲ್ಲಿ ಸಂಪ್ರದಾಯವಾದಿಗಳನ್ನು ಟೀಕಿಸಿರುವ ಈ ಅಂಶಗಳು ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ. ಅದರೆ ಈ ಕಾರ್ಯವನ್ನು ರಚನಾತ್ಮಕವಾಗಿ, ಪ್ರಗತಿಪರ ದೋರಣೆಯನ್ನು ತಮ್ಮ ಕಾದಂಬರಿಯಲ್ಲಿ ಅನುಸರಿಸಿಲ್ಲ ಎಂಬ ಅಭಿಪ್ರಾಯವನ್ನು ಹಲವು ದಲಿತ ಚಿಂತಕರು ಹೊಂದಿದ್ದಾರೆ.

ಚೋಮ ವ್ಯವಸ್ಥೆಯ ವಿರುದ್ಧ ಅತೃಪ್ತನಾಗಿದ್ದಾನೆ. ಅವನಿಗೆ ಭೂಮಿಬೇಕು ಎಂಬ ಹಂಬಲ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಆದರೆ ಅದನ್ನು ಪಡೆಯಲು ಆತ ಪ್ರಗತಿಪರವಾಗಿ ಚಿಂತಿಸದೇ ಇರುವುದು ಅವನು ಕಾಲಾಂತರದಿಂದ ನಂಬಿಕೊಂಡು ಬಂದಿರುವ ಭೂತ, ಪಂಜುರ್ಲಿ ಎಂಬ ಮೂಢನಂಬಿಕೆಯಲ್ಲಿ ಬಿದ್ದು ಹೊರಬರಲಾರದೇ ಅಲ್ಲೇ ತನ್ನ ದುರ್ಗತಿಯನ್ನು ಕಾಣುತ್ತಾನೆ. ಈ ಮೂಡನಂಬಿಕೆ ತಲತಲಾಂತರದಿಂದ ಶೋಷಣೆಗೆ ಒಳಪಡಿಸಿರುವ ವ್ಯವಸ್ಥೆಯ ಬೀಜ. ಜೋಮ ಇವುಗಳನ್ನು ವಿರೋದಿಸದೆ, ಆ ಕೊಳಕಿನಲ್ಲೆ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವುದು ವಿಪರ್ಯಾಸ. ಕಾದಂಬರಿಯಲ್ಲಿ ದಾಖಲಾಗಿರುವ ಈ ಅಂಶಗಳು ಪ್ರಗತಿಪರ ದಲಿತ ಚಿಂತನೆಗಳಿಗೆ ವಿರುದ್ದವಾದುವು. ಲೇಖಕರು ಈ ಕಾದಂಬರಿಯಲ್ಲಿ ಅಂತಿಮವಾಗಿ ಹೊಸದೇನನ್ನು ಹೇಳದೇ ದಲಿತರು ಹಳೆಯ ಸಂಪ್ರದಾಯದಲ್ಲಿಯೇ ಮುಂದುವರಿಯಬೇಕು ಎಂಬ ಆಶಯವನ್ನು ಹೊಂದಿರುವಂತಿದೆ. ಈ ಕಾರಣಕ್ಕಾಗಿ ದಲಿತರಲ್ಲದವರು ದಲಿತರ ಒಳ ಮನಸ್ಸಿನೊಳಗೆ ಪ್ರವೇಶಿಸಿ ಆವರ ಅಂತರಂಗವನ್ನು ಅರ್ಥ ಮಾಡಿಕೊಂಡು ಸಾಹಿತ್ಯದಲ್ಲಿ ಅಭಿವ್ಯಕ್ತಿಸಲಾರರು ಎಂಬ ವಾದವಿದೆ.

ಈ ವಾದದ ಹಿನ್ನಲೆಯಲ್ಲಿ ಕಾರಂತರ ಚೋಮನ ದುಡಿ ಕಾದಂಬರಿಯನ್ನು ಕುರಿತು ಮೊಗಳ್ಳಿ ಗಣೇಶ್ ಅವರ ಅಭಿಪ್ರಾಯವನ್ನು ಗಮನಿಸಬಹುದು. "........ ಒಂದು ಜನಾಂಗದ ಅಂತರಾಳವನ್ನು ಬೇರಿನ ಮೂಲದಿಂದ ಆತ್ಯಂತಿಕವಾಗಿ ಸಮಷ್ಟಿ ಧ್ಯಾನದಿಂದ ತುಂಬಿಕೊಡುವುದು ಅಷ್ಟು ಸಲೀಸಾದ ಕಾಯಕವಲ್ಲ. ಚೋಮನದುಡಿಯ ಪಾತ್ರಗಳು ಸಾಹಿತ್ಯದ ಪ್ರಜ್ಞೆಯಲ್ಲಿ ಕಲಾತ್ಮಕ ಆಕೃತಿಗಳಾಗಿವೆಯೇ ವಿನಃ ದಲಿತ ಲೋಕದ ತಳ ನರಕದಿಂದ ಬಂದವರು ತನ್ನ ತಲೆಮೇಲೆ ಕೂತವರನ್ನು ಅರ್ಥ ಮಾಡಿಕೊಳ್ಳುವ ರೀತಿಯೇ ಬೇರೆಯಾಗಿರುತ್ತದೆ. ತಲೆಮೇಲೆ ಭಾರ ಹೊತ್ತು ಕಲಾಂತರದಿಂದ ದಣಿದು ಆರ್ತವಾಗಿ ಕೂಗಿಕೊಳ್ಳುವವನ ಧ್ವನಿತಾರ್ಥಕ್ಕೂ ಅಂತಹ ಸ್ಥಿತಿಯ ಒಬ್ಬ ಅಸಹಾಯದನ್ನು ನೋಡಿ, ಕಲಾತ್ಮಕವಾಗಿ ಧ್ವನಿಸುವುದಕ್ಕೂ ತುಂಬಾ ಅಂತರವಿದೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ದೊಡ್ಡಗೌಡರ ಬಾಗಿಲಿಗೆ ನಮ್ಮ ಮೂಳೆಯತ್ವಾರಣ' ಎಂಬ ಒಂದೇ ಒಂದು ವಾಕ್ಯವು ಸಿದ್ದಲಿಂಗಯ್ಯ ಅಥವಾ ದಲಿತರು ಬರುವ ತನಕ ಬಂದೆ ಇರಲಿಲ್ಲ ಎಂದರೆ ನಮ್ಮ ಸಂವೇದನೆ ಹಾಗೂ ಅನುಭವಗಳ ಅಭಿವ್ಯಕ್ತಿಯ ತೀವ್ರತೆ ಮತ್ತು ಪ್ರಾಮಾಣಿಕತೆಯ ಅಂತರಗಳನ್ನು ಧ್ವನಿಸುತ್ತದೆ. ಆದ್ದರಿಂದಲ್ಲೇ ದಲಿತಾನುಭಾವ ಎನ್ನುವುದು ಸೃಜನಶೀಲ ಅಭಿವ್ಯಕ್ತಿಗೆ ವಿಶಿಷ್ಟವಾದ ಅನನ್ಯಧಾರೆ ಈ ಧಾರೆಯನ್ನು ಅನಾವರಣಗೊಳಿಸಲು ದಲಿತೇತರು ಅನರ್ಹರು ಎಂದು ಹೇಳಲಾಗದಿದ್ದರೂ ಆಲೋಕದ ಒಳಗಿನ ಸಂಕಟ, ಅಪಮಾನ, ಹಿಂಸೆ, ಶೋಷಣೆಯಿಂದ ನಲುಗಿ ಗ್ರಹಿಸುವ ರೀತಿ ಮತ್ಯಾರಿಗೂ ಬರಲಾರದು. ಈ ಹಿನ್ನಲೆಯಿಂದ ನೋಡಿದರೆ ಚೋಮನ ದುಡಿ ಕಾದಂಬರಿಯು ವೈಧಿಕ ನೆಲೆಯ ಪಾಪಗಳನ್ನು ತೊಳೆದುಕೊಳ್ಳಲು ಉದಾರ ಮಾನವತಾವಾದಿಯಾದ ಕಾರಂತರು ರೂಪಿಸಿಕೊಂಡ ಸಾಹಿತ್ಯಿಕ ಪ್ರಾಯಶ್ಚಿತವಾಗಿದೆ."೧೩. ಈ ಮಾತುಗಳು ದಲಿತೇತರ ಸಾಹಿತಿಗಳು ದಲಿತರನ್ನು ಕುರಿತು ಬರೆದಾಗ ದಲಿತರ ಸಮಗ್ರ ಚಿತ್ರಣವನ್ನು ನೀಡುವಲ್ಲಿ ವಿಫಲರಾಗುತ್ತಾರೆ. ಎಂಬ ಹೇಳಿಕೆಗೆ ಪೂರಕವಾಗಿದೆ. ಸಾವಿರಾರು ವರ್ಷಗಳ ಕಾಲ ದೌರ್ಜನ್ಯ ನಡೆಸಿದವರು ಹಾಗೂ ದೌರ್ಜನ್ಯಕ್ಕೆ ಒಳಗಾದವರ

ಮನೋಸ್ಥಿತಿಗಳು ಬೇರೆ ಬೇರೆಯಾಗಿರುತ್ತವೆ. ಈ ಕಾರಣಕ್ಕಾಗಿ ದಲಿತೇತರ ಲೇಖಕರು ದಲಿತರ ಸಮಗ್ರ ಚಿತ್ರಣವನ್ನು ಕೊಡಲು ವಿಫಲರಾಗುತ್ತಾರೆ. ಎಂಬ ಅಭಿಪ್ರಾಯವನ್ನು ಮೊಗಳ್ಳಿ ಗಣೇಶ್‌ರವರು ಹೊಂದಿದ್ದಾರೆ.

'ದಾಟು' ಕಾದಂಬರಿಯಲ್ಲಿ ಬೈರಪ್ಪ ನವರು ಚಿತ್ರಿಸಿರುವ ಅಸ್ಪೃಶ್ಯರ ಚಿತ್ರಣವನ್ನು ಅಸ್ಪೃಶ್ಯರ ಸಮಸ್ಯೆಗಳನ್ನು ಯಾವ ಲೇಖಕರು ಇಷ್ಟು ಯಶಸ್ವಿಯಾಗಿ ಚಿತ್ರಿಸಿಲ್ಲ. ಪ್ರವಾಹಕ್ಕೆ ಸಿಕ್ಕ ವ್ಯಕ್ತಿಯಂತೆ ವಾಚಕರು ಬೈರಪ್ಪನವರ ನಿರೂಪಣೆಯಲ್ಲಿ ಕೊಚ್ಚಿ ಹೋಗುತ್ತಾರೆ. ಅಂತಹ ನಿರೂಪಣಾ ತಂತ್ರವನ್ನು ಬೈರಪ್ಪನವರು ದಲಿತ ಪಾತ್ರಗಳ ಚಿತ್ರಣದಲ್ಲಿ ಬಳಸಿದ್ದಾರೆ. ದಲಿತ ಪಾತ್ರಗಳನ್ನು ದಾಖಲಿಸುವಾಗ ಅಲ್ಲಿನವರೆಗೂ ಇಲ್ಲದಿದ್ದಂತಹ ಒಂದು ಪ್ರಜ್ಞಾ ಪೂರ್ವಕ ಬದಲಾವಣೆಯನ್ನು ತಮ್ಮ ಕಾದಂಬರಿಯಲ್ಲಿ ಮಾಡಿಕೊಂಡಿದ್ದಾರೆ. 'ದಾಟು' ಕಾದಂಬರಿಯಲ್ಲಿ ಬರುವ ದಲಿತ ಪಾತ್ರ ಮೋಹನ್‌ದಾಸ ವಿದ್ಯಾವಂತ. ಕಾರಂತ, ಕುವೆಂಪು ಕಾದಂಬರಿಗಳಲ್ಲಿ ಬರುವ ದಲಿತ ಪಾತ್ರಗಳು ಅವಿದ್ಯಾವಂತ ಪಾತ್ರಗಳು. ಕಾದಂಬರಿಯಲ್ಲಿ ಮೋಹನ ದಾಸನ ಚಿಂತನೆ ಪ್ರಗತಿಪರ ನೆಲೆಯದು. ಆತ ಕಾದಂಬರಿಯ ಉದ್ದಕ್ಕೂ ದಲಿತರ ಉದ್ದಾರಕ್ಕಾಗಿ ಪಣತೊಡುತ್ತಾನೆ. ಈ ಏಳೆಯನ್ನು ಕಾದಂಬರಿಕಾರರು ತುಂಬಾ ಉತ್ಸಾಹದಿಂದ ಮುಂದೆ ಮಂದಕ್ಕೆ ಕೊಂಡೊಯ್ಯುತ್ತಾರೆ. ಆದರೆ ಈ ಕಾದಂಬರಿಯಲ್ಲಿ ಬರುವ ಕಾತ್ಯಾಯಿನಿ, ಸತ್ಯಭಾಮ, ಶ್ರೀನಿವಾಸ, ಮೋಹನ ದಾಸ ಮುಂತಾದ ಪಾತ್ರಗಳು ತಮ್ಮ ಕ್ರಾಂತಿಕಾರಿ ವಿಚಾರಗಳಿಗೆ ತಾವೇ ಹೆದರಿ ಹಿಮ್ಮೆಟ್ಟುತ್ತವೆ. ಭಾವುಕರಾಗಿ ಮುನ್ನುಗ್ಗುವ ಪಾತ್ರಗಳು ಆ ಆಸೆಯನ್ನು ತಮ್ಮೊಳಗೆ ಅಸಹಾಯಕರಾಗಿ ಮುದುರಿಟ್ಟುಕೊಳ್ಳುತ್ತವೆ. ಇದನ್ನು ಸಮರ್ಥಿಸಲು ಕಾದಂಬರಿಯ ಒಂದು ಸಂದರ್ಭವನ್ನು ನೋಡಬಹುದು.

ಪ್ರಗತಿಪರ ಚಿಂತನೆಯ ಸ್ವಭಾವವುಳ್ಳ ಮೋಹನ ದಾಸ ದಲಿತರನ್ನು ದೇವಸ್ಥಾನ ಪ್ರವೇಶಿಸಲು ಕರೆದುಕೊಂಡು ಹೋಗುತ್ತಾನೆ. ಅಲ್ಲಿನವರೆಗೆ ಮಠ ದೇವಸ್ಥಾನಗಳು ಕೇವಲ ಉತ್ತಮ ಕುಲದ ಆಸ್ತಿಯಾಗಿದ್ದವು. ದಲಿತರು ದೇವಸ್ಥಾನ ಪ್ರವೇಶಿಸುವುದನ್ನು ಪುರೋಹಿತಶಾಹಿ ನಿಷೇದಿಸಿತ್ತು. ಸಮಾಜದಲ್ಲಿ ಸಮಾನತೆಯನ್ನು ತರುವ ಕ್ರಾಂತಿಕಾರಕ ವಿಚಾರದಿಂದ ಮೋಹನದಾಸ ಈ ನಿರ್ಣಯವನ್ನು ಕೈಗೊಳ್ಳುತ್ತಾನೆ. ಈ ನಿರ್ಣಯವನ್ನು ಕೈಗೊಳ್ಳುವ ಮೋಹನದಾಸ ವೈಚಾರಿಕವಾದಿಯಲ್ಲ ಅವನಿಗೆ ಸಾವಿರಾರು ವರ್ಷಗಳಿಂದ ಹರಿದು ಬಂದಿರುವ ಸಾಂಪ್ರದಾಯಕ ನಂಬಿಕೆಗಳಲ್ಲಿ ವಿಶ್ವಾಸವಿದೆ. ಹಾಗೆಯೇ ಈ ನಂಬಿಕೆಗಳ ಬಗ್ಗೆ ದಿಗಿಲು ಸಹ. ಇವುಗಳಿಂದ ಆತ ಮುಕ್ತಿ ಪಡೆದಿಲ್ಲ. ಅರೆ ಬರೆ ನಂಬಿಕಗಳು ಅವನಲ್ಲಿ ಈಗಲೂ ಇದೆ. ಇಂತಹ ಪರಿಸ್ಥಿತಿಯಲ್ಲಿ ಆತ ದೇವಸ್ಥಾನದೊಳಕ್ಕೆ ತನ್ನವರನ್ನು ಕರೆದುಕೊಂಡು ಹಲವು ಜನರ ವಿರೋಧದ ನಡುವೆಯು ದೇವಸ್ಥಾನ ಪ್ರವೇಶಿಸುತ್ತಾನೆ. ಗರ್ಭಗುಡಿಯ ಒಳಗೆ ಮಂಗಳಾರತಿ ಆಗುವ ಸಮಯದಲ್ಲಿ ದೇವರ ವಿಗ್ರಹವನ್ನು ನೋಡುತ್ತಾನೆ. "......ಅದನ್ನು ದಿಟ್ಟಿಸಿ ನೋಡುತ್ತಾ ನಿಂತ ಮೋಹನ ದಾಸನಿಗೆ ಕಣ್ಣು ಕತ್ತಲೆಯಾಗುವಂತೆ ಎನಿಸಿತು. ತನ್ನ ಇಡೀ ಶರೀರವು ತೂಗುವಂತೆ ಭಾಸವಾಹಿತು. ಅವನು ಕಣ್ಣು ಮುಚ್ಚಿಕೊಂಡ. ತಲೆ ಸುತ್ತಿಬಂತು. ಕೆಳಗೆ ಕೂರಬೇಕೆನಿಸುವುದರಲ್ಲಿ ಧೋಪ್ಪನೆ ಬಿದ್ದು ಬಿಟ್ಟ......'ನಮ್ಮೂರ ದೇವರ ಸತ್ಯ ನಿಮಗೇನು ಗೋತ್ತೋ ? ರಾವು ಬಡಿದಿದೆ. ರಾವು, ಬ್ಯಾಡ ಅಂದರೂ ಯಾಕೆ ಗುಡಿ ಒಳಕ್ಕೆ ಹೋದಿರಿ' ? ಎಂದು ವೆಂಕಟೇಶ ಅಬ್ಬರಿಸಿದ. ಹುಡುಗರೆಲ್ಲಾ ಹೆದರಿದರು. ಗಂಡಸರೆಲ್ಲ ಮೆಟ್ಟಿಲಿನಿಂದ ಕೆಳಗೆ ಓಡಲು ಆರಂಭಿಸಿದರು. ಹಿಂದೆ ನಿಂತಿದ್ದ ಹೆಂಗಸರು ಏನಾಯಿತೆಂಬುದನ್ನು ಕೇಳದೆಯೇ ಹಾವು ಕಡಿದವರಂತೆ ತಮ್ಮ ಗಂಡಸರ ಹಿಂದೆ ಓಡಿದರು."೧೪ ಎಂಬ ವಿವರಣೆಯನ್ನು ಭೈರಪ್ಪನವರು ನೀಡುತ್ತಾರೆ. ಮುಖ್ಯವಾಗಿ ಇಲ್ಲಿ ಎರಡು ದಲಿತ ವಿರೋಧಿ ನೀತಿಗಳಿವೆ. ಒಂದು ತನ್ನ ವಿಜಯದ ಉನ್ನತ ಶಿಖರದಲ್ಲಿದ್ದ ಮೋಹನ ದಾಸ ಏಕೆ ಬವಳಿ ಬಂದವನಂತೆ ಕೆಳಗೆ ಬೀಳುತ್ತಾನೆ ? ಈ ಪ್ರಶ್ನೆಗೆ ಭೈರಪ್ಪನವರ ಮೇಲಿನ ವಿವರಣೆಯಲ್ಲಿ

ಉತ್ತರವಿಲ್ಲ. ಭೈರಪ್ಪನವರು ಮೋಹನದಾಸನ ಮನಸ್ಸಿನ್ನು ಒಳಹೊಕ್ಕು ವಿಶ್ಲೇಷಸುವುದಿಲ್ಲ. ಎರಡನೆಯದು ವೆಂಕಟೇಶ ರಾವು ಬಡಿದಿದೆ. ರಾವು ಎಂದಾಗ ಅಲ್ಲಿನ ಯಾರು ಅವನ ಮೂಢನಂಬಿಕೆಯನ್ನು ಪ್ರಶ್ನಿಸುವುದಿಲ್ಲ. ಭೈರಪ್ಪನವರು ವೆಂಕಟೇಶನ ವಿಚಾರದಲ್ಲಿ ಪರ ಅಥವಾ ವಿರೋಧದನಿಲುವನ್ನು ತಮ್ಮ ಕಾದಂಬರಿಯಲ್ಲಿ ವ್ಯಕ್ತಪಡಿಸಿಲ್ಲ. ಇಂತಹ ಕಾದಂಬರಿಕಾರರ ಧೋರಣೆಗಳು ದಲಿತ ಸಮುದಾಯದಲ್ಲಿ ಭಯ ಮತ್ತು ವರ್ಗ ಪ್ರಜ್ಞೆಯನ್ನು ಶಾಶ್ವತವಾಗಿ ದಲಿತರ ಮನದಲ್ಲಿ ಬಿತ್ತಲು ಮಾಡುವ ಪ್ರಯತ್ನಗಳೆಂದು ಭಾವಿಸದೇ ವಿಧಿ ಇಲ್ಲ. ಈ ಕಾದಂಬರಿಯು ದಲಿತರಪರವಾದ ವಿಚಾರಗಳನ್ನು ಒಳಗೊಳ್ಳದೆ, ಅವರನ್ನು ಪ್ರಗತಿಪರ ಚಿಂತನೆಗಳಿಗೆ ತಮ್ಮನ್ನು ತೊಡಗಿಸಿಕೊಳ್ಳುವ ಯಾವುದೇ ವೈಚಾರಿಕತೆಯನ್ನು ಈ ಕಾದಂಬರಿ ನೀಡುವುದಿಲ್ಲ. ದಲಿತರನ್ನು ಸದಾ ಶೋಷಣೆ ಅಂದಕಾರದಲ್ಲಿಡಲು ವೈದಿಕ ಪರಂಪರೆ ಮಾಡುವ ವ್ಯವಸ್ಥಿತ ಸಂಚುಗಳಲ್ಲಿ ಈ ಪ್ರಯತ್ನವು ಒಂದು.

ಭಾರತೀಯ ಸಾಹಿತ್ಯ ಪರಂಪರೆಯ ಪ್ರಾರಂಭದಿಂದಲೂ ಇಂತಹ ತಿರೋಗಾಮಿ ಪ್ರಕ್ರಿಯೆಗಳು ನಡೆಯುತ್ತಿರುತ್ತವೆ. ಈ ಹಿನ್ನಲೆಯಲ್ಲಿ ಆರಂಭದಿಂದಲೂ ಕನ್ನಡ ಸಾಹಿತ್ಯ ಸಂದರ್ಭ ಹಾಗೂ ಭಾರತೀಯ ಸಂದರ್ಭಗಳಲ್ಲಿ ಮುಖ್ಯವಾಗಿ ಎರಡು ಪಂಥಗಳನ್ನು ನೋಡಬಹುದು. ಒಂದು ವೈದಿಕ ಮತ್ತೊಂದು ಅವೈದಿಕ ಈ ಎರಡು ಪಂಥಗಳು ನಿರಂತರವಾಗಿ ಘರ್ಷಿಸುತ್ತಾ ಕೆಲವೊಮ್ಮೆ ಸಹಕಾರಿಸುತ್ತಾ ಸಾಹಿತ್ಯ ಸೇವೆಯನ್ನು ಪೋಷಿಸಿಕೊಂಡು ಬಂದಿವೆ. ಜೈನ, ಬೌದ್ಧ ಧರ್ಮಗಳ ಸಾಹಿತ್ಯವು ವೈಚಾರಿಕತೆಯನ್ನು ಮಾನವೀಯತೆಯನ್ನು ಪ್ರೋತ್ಸಾಹಿಸುತ್ತಾ ಬಂದಿವೆ. ಆದರೆ ವೈದಿಕ ಮತಾವಲಂಬಿ ಆಚಾರ್ಯರುಗಳು, ಪಂಥಗಳು ಸಮಾಜವನ್ನು ಶ್ರೀ ಸಾಮಾನ್ಯರನ್ನು ಇವತ್ತಿಗೂ ನಾನಾರೂಪದಲ್ಲಿ ನಾನಾರೀತಿಯಾಗಿ ವಂಚಿಸುತ್ತಿವೆ. ಕ್ರಾಂತಿಕಾರಕ ವಿಚಾರಗಳನ್ನು ಬಾಯಿಯಲ್ಲಿ ಪಠನ ಮಾಡುತ್ತಾ ಅಂತರಾಳದಲ್ಲಿ ಪರಿವರ್ತನೆಯ ಬಗ್ಗೆ ಕಡು ವೈರಭಾವನೆಯನ್ನು ಹೊಂದಿರುವುದು ವಿಪರ್ಯಾಸದ ಸಂಗತಿ.

ಭಾರತೀಯ ಸಂದರ್ಭದಲ್ಲಿ ಸಾಹಿತ್ಯ ಪ್ರಕ್ರಿಯೆಯನ್ನು ಜಾತಿ ಪದ್ದತಿ ನಿಯಂತ್ರಿಸುತ್ತಾ ಬಂದಿದೆ ಎಂದರೆ ತಪ್ಪಾಗಲಾರದು. ಪ್ರತಿಯೊಬ್ಬ ಲೇಖಕನ ಒಳಗೂ ಜಾತಿಯ ಭೂತ ಕುಳಿತು ಅವರ ಸೃಜನಶೀಲ ಪ್ರಕ್ರಿಯೆಯಲ್ಲಿ ತನ್ನ ತೀರ್ಮಾನಗಳನ್ನು ವ್ಯಕ್ತಪಡಿಸಲು ಈ ಜಾತಿಯ ಭೂತ ಸದಾ ತಡೆಯನ್ನೊಡ್ಡುತ್ತಿರುತ್ತದೆ. ಈ ಪ್ರಕ್ರಿಯೆಯ ಭೂತ ದಲಿತ ಸಾಹಿತಿಗಳನ್ನು ಬಿಟ್ಟಿಲ್ಲ. ಪ್ರತಿಯೊಬ್ಬ ಲೇಖಕನನ್ನು ಅಗತ್ಯ ಬಂದಾಗಲೆಲ್ಲಾ ಜಾತಿಯು ಸ್ವತಃ ಲೇಖಕನ ಜಾಗ್ರೃತಿಯನ್ನು ವಂಚಿಸುತ್ತದೆ. ಜಾತಿಯ ಒತ್ತಡಗಳಿಂದ ತಪ್ಪಿಸಿಕೊಂಡು ತನ್ನ ಸೃಜನಶೀಲತೆಯನ್ನು ಅಭಿವ್ಯಕ್ತಪಡಿಸುವ ಕಲೆ ಎಲ್ಲಾ ಲೇಖಕರಿಗೂ ಬರುವುದಿಲ್ಲ. ಈ ಕಾರಣಕ್ಕಾಗಿ ಚೋಮನ ದುಡಿಯ ಚೋಮ ಸಾಯುತ್ತಾನೆ. ದಣಿ ಸಂಕಪ್ಪಯ್ಯ ಬದುಕುತ್ತಾನೆ. ದಾಟು ಕಾದಂಬರಿಯ ಕ್ರಾಂತಿಕಾರ ಪಾತ್ರಗಳಾದ ಮೀರಾ, ಶ್ರೀನಿವಾಸ, ಮೊಹನದಾಸ ಮುಂತಾದವರು ಅಳಿಯುತ್ತಾರೆ. ಇದರೊಂದಿಗೆ ವ್ಯವಸ್ಥೆಯನ್ನು ಬದಲಾಯಿಸಬೇಕೆಂಬ ಅವರ ಹಂಬಲಗಳು ಸಹ ಸಾಯುತ್ತವೆ. ಮೂಲಭೂತವಾದದ ಪ್ರತಿಪಾದಕರು, ಯಥಾಸ್ಥಿತಿವಾದಕ ಪಾತ್ರಗಳು ಬದುಕುತ್ತವೆ. ಈ ಅಪಾಯಗಳು ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವುದರಿಂದ ದಲಿತ ಸಮಾಜದಲ್ಲಿ ಪ್ರಗತಿಗೆ ಹಿನ್ನಡೆ ಉಂಟಾಗುತ್ತದೆ. ಎಂಬ ಆಶಯವನ್ನು ಹೊಂದಿರುವ ಹಲವು ದಲಿತ ಚಿಂತಕರು ದಲಿತೇತರ ಲೇಖಕ ದಲಿತ ಚಿತ್ರಣವನ್ನು ಸಮಗ್ರವಾಗಿ ನಿರೂಪಿಸಲಾರ ಎಂಬ ನಂಬಿಕೆಯನ್ನು ಹೊಂದಿದ್ದಾರೆ. ಆ ಕಾರಣಕ್ಕಾಗಿ ಕನ್ನಡ ಸಾಹಿತ್ಯದಲ್ಲಿ **ಅಥೆಂಟಿಸಿಟಿ** (Authenticity) ಪ್ರಶ್ನೆ ಬಿಡಿಸಲಾಗದ ಕಗ್ಗಂಟಾಗಿದೆ.

ಆದರೆ ದಲಿತ ಸಾಹಿತ್ಯವನ್ನು ದಲಿತರೇ ದಾಖಲಿಸಬೇಕು ಎಂಬ ಕೆಲವು ದಲಿತ ಚಿಂತಕರ ಅಭಿಪ್ರಾಯವನ್ನು ಅನೇಕ ಪ್ರಗತಿ ಪರ ದಲಿತ ಚಿಂತಕರು ಒಪ್ಪುವುದಿಲ್ಲ. ಈ ಅಭಿಪ್ರಾಯವನ್ನು ಅವರು ಹಲವು ವಿಚಾರಧಾರೆಗಳಿಂದ ಅದನ್ನು ಪ್ರಶ್ನಿಸುತ್ತಾರೆ. ದೇವನೂರ ಮಹಾದೇವ ಅವರು ಪ್ರಗತಿಪರ ಧೋರಣೆಯ ಹಿನ್ನಲೆಯಲ್ಲಿ **ನನ್ನ ಸಾಹಿತ್ಯ ಕೃತಿಗಳನ್ನು ಒಟ್ಟು ಕನ್ನಡ ಸಾಹಿತ್ಯ ಕೃತಿಗಳೊಡನೆ ಇಟ್ಟು ನೋಡಿ** ಎಂಬ ಮಾತನ್ನು ಹೇಳಿದ್ದಾರೆ. ಅವರ ಈ ಮಾತಿನ ಹಿಂದೆ ಸಾಹಿತಿಗಳ ಕದನಕ್ಕೆ ವಿರಾಮವನ್ನು ಹಾಕುವ ಉದ್ದೇಶವಿದೆ. ಸಾಮಾನ್ಯವಾಗಿ ಮುಕ್ಕಾಲು ಪಾಲು ದಲಿತ ಲೇಖಕರು ದಲಿತೇತರರು ಬರೆದ ದಲಿತ ಸಾಹಿತ್ಯವನ್ನು ದಲಿತ ಸಾಹಿತ್ಯದ ಪರಿಧಿಯೊಳಗೆ ಒಪ್ಪಿಕೊಂಡಿದ್ದಾರೆ.

ದಲಿತರ ಅನುಭವಗಳು ಅಥೆಂಟಿಕ್ ಆದುವು ಎಂಬ ವಿಷಯದಲ್ಲಿ ಯಾವ ಲೇಖಕರಲ್ಲೂ ಭಿನ್ನಾಭಿಪ್ರಾಯಗಳಿಲ್ಲ. ಆದರೆ ದಲಿತರೊಂದಿಗೆ ಬದುಕಿದ ದಲಿತೇತರರ ದಲಿತ ಅನುಭವಗಳು ಅಥೆಂಟಿಕ್ ಅಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಈ ವಿಚಾರವಾಗಿ ಅರವಿಂದ ಮಾಲಗತ್ತಿಯವರ ಅಭಿಪ್ರಾಯವನ್ನು ನೋಡಬಹುದು.

" ಹೆಣ್ಣಿನ ಅನುಭವಗಳನ್ನು ಯಥಾವತ್ತಾಗಿ ಗಂಡಿನಿಂದ ಕೊಡಲಾಗದು. ಆದೇ ರೀತಿ ಗಂಡಿನ ಅನುಭವಗಳನ್ನು ಯಥಾವತ್ತಾಗಿ ಹೆಣ್ಣಿಗೂ ಕೊಡಲಾಗದು. ಆದರೆ ಒಂದು ಸಮಸ್ಯೆಯ ಹಿಂದೆ ಅಥವಾ ಒಂದು ವಸ್ತುವಿನ ಹಿಂದೆ ಪಡೆದುಕೊಂಡ ಇಬ್ಬರ ಅನುಭವಗಳು ವಿಶಿಷ್ಟವಾದವು ಮತ್ತು ಅಷ್ಟೇ ಅಥೆಂಟಿಕ್ ಆದವು. ಉದಾಹರಣೆಗೆ : ಕಾಮ ಎಂಬ ಒಂದು ವಸ್ತುವಿನ ಹಿನ್ನಲೆಯಲ್ಲಿ ಗಂಡು ಮತ್ತು ಹೆಣ್ಣು ಅನುಭವಿಸಿದ ಅನುಭವಗಳು ವಿಶಿಷ್ಟವಾಗಿದ್ದು, ಬೇರೆ ಬೇರೆ ಸ್ತರಗಳಿಂದ ಕೂಡಿವೆ. ಈ ಒಂದು ವಸ್ತುವಿನ ಸುತ್ತ ಬಂದ ವಿಭಿನ್ನ ಸ್ತರದ ಅನುಭವಗಳು ಒಟ್ಟಿಗೆ ಅಭಿವ್ಯಕ್ತಗೊಂಡಾಗ, ಆ ವಸ್ತುವಿಗೆ ಪರಿಪೂರ್ಣತೆ ಪ್ರಾಪ್ತವಾಗುತ್ತದೆ. ಇಲ್ಲಿ ಹೆಣ್ಣಿನ ಅನುಭವವೇ ಶ್ರೇಷ್ಠ ಅಥವಾ ಗಂಡಿನ ಅನುಭವವೇ ಶ್ರೇಷ್ಠ ಎಂದು ಹೇಳಲಾಗದು. ಇದೇ ರೀತಿ ಅಸ್ಪೃಶ್ಯತೆ, ಸಾಮಾಜಿಕ ವ್ಯವಸ್ಥೆಯ ಹಿನ್ನಲೆಯಲ್ಲಿ ದಲಿತರು – ದಲಿತೇತರರು ಪಡೆದುಕೊಂಡ ಅನುಭವಗಳು ವಿಶಿಷ್ಟವಾದವು. ದಲಿತರ ಕುರಿತಾಗಿ ಇವರಿಬ್ಬರ ಅನುಭವಗಳು ಅಭಿವ್ಯಕ್ತಿಗೊಂಡಾಗ ದಲಿತ ಸಾಹಿತ್ಯಕ್ಕೆ ಪರಿಪೂರ್ಣತೆ ಬರುತ್ತದೆ. ಒಂದು ಚಳುವಳಿಗೆ ಪರಿಪೂರ್ಣತೆ ದಕ್ಕುತ್ತದೆ. ಕೇವಲ ದಲಿತರೆ ಬರೆದದ್ದು ದಲಿತ ಸಾಹಿತ್ಯವಾಗುತ್ತದೆ ಎಂದು ವ್ಯಾಖ್ಯಾನಿಸಿದ್ದಾದರೆ. ಒಂದೇ ವಾರ್ಡಿನ ರೋಗಿಗಳು ನರಳಿದ ರೋದನದ ಸಾಹಿತ್ಯವಾಗುತ್ತದೆಯೇ ವಿನಃ ಪರಿಪೂರ್ಣವಾದ ಅಥವಾ ಸಮೃದ್ಧವಾದ ಸಾಹಿತ್ಯವಾಗಲಾರದು."೧೫ ಎಂಬ ಅರವಿಂದ ಮಾಲಗತ್ತಿಯವರ ಅಭಿಪ್ರಾಯದಲ್ಲಿ ಪ್ರಗತಿ ಪರ ಧೋರಣೆಯ ಅಂಶಗಳನ್ನು ಕಾಣಬುಹುದು. ದಲಿತ ಜೀವನವನ್ನು ಅಲ್ಲಿಯ ಜೀವನದ ಘಟನೆಗಳನ್ನು ಯಾವ ಜಾತಿಯ ಲೇಖಕನಾದರೂ ಪರಿಚಯಿಸಲು ಯಾವುದೇ ಅಡ್ಡಿ ಇಲ್ಲ. ಆದರೆ ಕೆಲವು ವಿಚಾರವಾದಿಗಳು ಸ್ವಯಂ ಪ್ರತಿಷ್ಠೆಗೊಸ್ಕರ ಸಾಹಿತ್ಯ ಸೃಷ್ಟಿಗೆ ಕೆಲವು ಮಿತಿಗಳನ್ನು ನಿರ್ಮಿಸಿ ಯಜಮಾನಿಕೆಯನ್ನು ನಡೆಸುತ್ತಾರೆ. ಇದು ಒಂದು ಪ್ರಗತಿಪರ ಪಥದಲ್ಲಿ ಮುನ್ನಡೆಯುವ ಸಾಹಿತ್ಯಕ್ಕೆ ಒಂದು ಕಂಟಕವಿದ್ದಂತೆ. ಈ ಹಿನ್ನಲೆಯಲ್ಲಿ ಅರವಿಂದ ಮಾಲಗತ್ತಿಯವರ ಹೇಳಿಕೆ ದಲಿತ ಸಾಹಿತ್ಯವನ್ನು ಪ್ರತ್ಯೇಕಿಸದೆ ಸಮಗ್ರ ದೃಷ್ಟಿಯಲ್ಲಿ ನೋಡುವ ಪ್ರಜ್ಞೆಯನ್ನು ಮೂಡಿಸುತ್ತದೆ.

ಒಬ್ಬ ಮೇಲ್ವರ್ಗದ ಲೇಖಕ ತಾನು ನೋಡಿದ ದಲಿತರ ನೋವುಗಳನ್ನು ಚಿತ್ರಿಸಲು ಅವನು ಕೆಳಜಾತಿಯೊಂದರಲ್ಲಿ ಹುಟ್ಟಿ ಬರಬೇಕಾಗಿಲ್ಲ. ಬ್ರಾಹ್ಮಣ ಜಾತಿಗೆ ಸೇರಿದ ಲೇಖಕನೊಬ್ಬ ಬ್ರಾಹ್ಮಣ ಸಾಹಿತ್ಯವನ್ನಲ್ಲದೇ ಬೇರೇನೂ ರಚಿಸಬಾರದು ಎಂಬ ನಿರ್ಬಂಧವನ್ನು ಅವನ ಮೇಲೆ ಹೇರಿದಂತಾಗುತ್ತದೆ. ಈ ಕಾರಣಕ್ಕಾಗಿ ದಲಿತ ಅನುಭವಗಳನ್ನು ಪ್ರಮಾಣಿಕವಾಗಿ ಚಿತ್ರಿಸಬಲ್ಲ ಯಾರೇ ಆದರೂ ದಲಿತ ಸಾಹಿತ್ಯದ ರಚನೆಯಲ್ಲಿ ತೊಡಗಬಹುದು. ಈ ಹಿಂದೆ ದಲಿತರನ್ನು ಕುರಿತು ದಲಿತರೇ ಬರೆದ ಎಷ್ಟೋ ದಲಿತ ಸಾಹಿತ್ಯದಲ್ಲಿ ದಲಿತರಿಗೆ ಅವಮಾನವನ್ನು ಮಾಡುವ ಅವರನ್ನು ಹೀನಾಯವಾಗಿ

ಕಾಣುವ ಅನೇಕ ಚಿತ್ರಣಗಳನ್ನು ತಮ್ಮ ಕೃತಿಗಳಲ್ಲಿ ದಾಖಲಿಸಿರುವುದನ್ನು ಕಾಣಬುಹುದು. ದಲಿತ ಹೆಣ್ಣು ಮಕ್ಕಳು ಮೇಲ್ಜಾತಿಯ ಗಂಡಸರೊಂದಿಗೆ ಸಂಬಂಧಗಳನ್ನು ಇಟ್ಟಿಕೊಂಡಿರುವ, ಅಂತರಜಾತಿಯ ವಿವಾಹಗಳನ್ನು ಖಂಡಿಸುವ ಎಷ್ಟೊ ಚಿತ್ರಣಗಳು ದಲಿತ ಸಾಹಿತ್ಯದಲ್ಲಿಯೇ ದಾಖಲಾಗಿರುವುದು ವಿಪರ್ಯಾಸ.

ಕುವೆಂಪು ಅವರ ಸಾಹಿತ್ಯದಲ್ಲಿಯೂ ಕೆಲವು ದಲಿತ ವಿದ್ವಾಂಸರು ಈ 'ಅಥೆಂಟಿಸಿಟಿ' ಯ ಪ್ರಶ್ನೆಯನ್ನು ಎತ್ತಿದ್ದಾರೆ. ಬಿ. ಕೃಷ್ಣಪ್ಪನವರು ಕುವೆಂಪುರವರ ಕಾದಂಬರಿಗಳಲ್ಲಿನ ಕೆಲವು ದಲಿತ ಪಾತ್ರಚಿತ್ರಣಗಳ ಬಗ್ಗೆ ಅಕ್ಷೆಪಣೆಯನ್ನು ವ್ಯಕ್ತಪಡಿಸಿದ್ದಾರೆ. ಅವರು ಕುವೆಂಪು ಧೋರಣೆಯನ್ನು ಈ ಕೆಳಗಿನಂತೆ ಖಂಡಿಸುತ್ತಾರೆ. "...... ದಲಿತ ಪಾತ್ರಗಳು ಕೇವಲ ಹೆಂಡ, ಮಾಂಸ, ಕಾಮ, ಇತ್ಯಾದಿ ಮಣ್ಣಿನ ಸ್ತರದಲ್ಲಿಯೇ ಬದುಕಿ, ಪ್ರತಿಭಟಿಸದೆ, ಘರ್ಷಿಸದೆ, ಅರ್ಥೈಸಿಕೊಳ್ಳದೇ ಹೋಗುತ್ತವೆ. ಕುವೆಂಪು **ಒಡೇರ ದಿಣ್ಣೆ** ಮೇಲೆ ನಿಂತು ದಲಿತರ ಬದುಕನ್ನು ನೋಡಲು ಸಾಧ್ಯವೇ ಹೊರತು ಹೊಲೆಯರ ಗುಡಿಸಲಿನಲ್ಲಿ ಕುಲಿತು ನೋಡಲಾರರು." (ಬಿ. ಕೃಷ್ಣಪ್ಪ : ೨೦೦೨ : ೭೨) ಎಂಬ ಆರೋಪವನ್ನು ಕುವೆಂಪುರವರ ಮೇಲೆ ಮಾಡಿದ್ದಾರೆ. ಆದರೆ ಕೃಷ್ಣಪ್ಪನವರ ಹೇಳಿಕೆ ದುಡುಕಿನದು ಎಂಬುದು ಕಾದಂಬರಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದ ಯಾರಿಗೆ ಆದರೂ ಅನಿಸದಿರದು.

ಕುವೆಂಪು ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ 'ದಲಿತ ಲೋಕ' ವಿಶಿಷ್ಟ ಬಗೆಯದು ನವೋದಯ ಸಂದರ್ಭದ ಯಾವ ಲೇಖಕರು ಸಹ ಕುವೆಂಪು ಅವರಷ್ಟು ಸೂಕ್ಷ್ಮವಾಗಿ ದಲಿತ ಬದುಕನ್ನು ಅವಲೊಕಿಸಿಲ್ಲ. ಕುವೆಂಪುರವರು ದಲಿತರ ಸಮಸ್ಯೆ ಹಾಗೂ ದಲಿತರ ಬದುಕು ಎರಡನ್ನು ತುಂಬಾ ಹತ್ತಿರದಿಂದ ನೋಡಿದವರಂತೆ ನೈಜವಾಗಿ ಚಿತ್ರಿಸುತ್ತಾರೆ. ಇದಕ್ಕೆ ಅವರ ಕಾದಂಬರಿಯಲ್ಲಿ ಹಲವು ಪ್ರಸಂಗಗಳೇ ಸಾಕ್ಷಿ. ಹೊಲೆಯರ ಸೇಸಿಯ ಪ್ರತಿಭಟನೆಯ ಸಂದರ್ಭ, ಗುತ್ತಿ ತನ್ನ ಹುಲಿಯನನ್ನು ಮುಕುಂದಯ್ಯನಿಗೆ ಕೊಟ್ಟಾಗಿನ ಅವನ ಮನಃ ಸ್ಥಿತಿಯನ್ನು ವಿವರಿಸುವ ಸಂದರ್ಭ ಇಂತಹ ಹಲವು ಸಂದರ್ಭಗಳಲ್ಲಿ ಕುವೆಂಪುರವರು ದಲಿತರ ಬಗ್ಗೆ ಹೊಂದಿದ್ದ ಮಾನವೀಯ ನೆಲೆಗಳನ್ನು ತಿಳಿಸುತ್ತವೆ. ಕುವೆಂಪುರವರ ಸಾಹಿತ್ಯದಲ್ಲಿನ ದಲಿತ ಪ್ರಜ್ಞೆಯನ್ನು ಹಲವಾರು ವಿದ್ವಾಂಸರು ಪ್ರಮಾಣಿಕವಾಗಿ ವಿಮರ್ಶಿಸಿದ್ದಾರೆ. ಅವರಲ್ಲಿ ಮೊಗಳ್ಳಿ ಗಣೇಶ್ ರವರು ಒಬ್ಬರು ಅವರ ಹೇಳಿಕೆಯನ್ನು ಕೆಳಗಿನಂತೆ ನೋಡಬಹುದು. " ಕುವೆಂಪು ಅವರ ಸೃಜನಶೀಲತೆಯು ವರ್ತಮಾನದ ಗದ್ದಲಕ್ಕೆ ಮುಖಾಮುಖಿಯಾದುದಲ್ಲ. ಗತಕಾಲದ ಎಲ್ಲಾ ಹಿಂಸೆಯ ಕೂಪಗಳ ಬಗ್ಗೆ ಕುವೆಂಪು ವೈಚಾರಿಕವಾಗಿ ಆಕ್ರೋಶವನ್ನು ವ್ಯಕ್ತಪಡಿಸುತ್ತಿದ್ದರಾದರೂ ಸೃಜನಶೀಲ ಧ್ಯಾನದಲ್ಲಿ ಪರಿಪಕ್ವ ಮಾನವತ್ವವನ್ನೆ ಪ್ರತಿಪಾದಿಸುತ್ತಿದ್ದರು. ಏಕಲವ್ಯ ಜ್ಞಾನದ ದಿಗ್ವಿಜಯವನ್ನು ಸಾಧಿಸುವುದು ಇಂತಹ ಧ್ಯಾನದಿಂದಲೆ. ಶಂಭೂಕ ಕೂಡ ಇದೇ ನೆಲೆಯಲ್ಲಿ ಜ್ಞಾನದ ಗರ್ವಭಂಗ ಮಾಡುತ್ತಾನೆ. ಜಲಗಾರನು ಇದೇ ದಾರಿಯಲ್ಲಿ ವೈದಿಕ ಶಾಹಿಯ ಅಹಂಕಾರವನ್ನು ಮುರಿಯುತ್ತಾನೆ. ಪರೋಕ್ಷವಾಗಿ ಜಾತಿಯ ಶಾಪದಿಂದಲೂ ವಿಮುಕ್ತಿಯನ್ನು ಪಡೆದುಕೊಂಡು ಪರರ ಜಾತಿಯ ಕೋಟೆಯನ್ನು ಕೆಡವಿ ಅವರನ್ನು ಅದರಿಂದ ಬಿಡುಗಡೆ ಮಾಡುತ್ತಾರೆ. ಶಂಭೂಕ ಈ ಕಾರಣದಿಂದಲೆ ವೈದಿಕನನ್ನು ಮುಕ್ತಿ ಮಾರ್ಗಕ್ಕೆ ಕರೆದುಕೊಳ್ಳುವುದು. ಧರ್ಮ-ಅಧರ್ಮಗಳ ಹುಸಿಯನ್ನು ಅತ್ಯಂತಿಕ ನಿಷ್ಠೆಯಿಂದ ವ್ಯಕ್ತಪಡಿಸುವ ಕುವೆಂಪು ಅವರು ದಲಿತ ಸಮಾಜಕ್ಕೆ ಬೇಕಾದ ಸೃಜನಶೀಲ ಆವರಣವನ್ನು ನಿರ್ಮಿಸಿದರು. ದಲಿತರಿಗೆ ಸೃಜನಶೀಲವಾದ ಎಲ್ಲಾ ಅವಕಾಶಗಳನ್ನು ಮುಚ್ಚಿದ್ದ ಸ್ಥಿತಿಯಲ್ಲಿ ದಲಿತ ಲೋಕವನ್ನು ಸಾಹಿತ್ಯದಲ್ಲಿ ಪ್ರತಿನಿಧಿಸುತ್ತಲೇ ದಲಿತರಿಗೆ ನರಕ ಸೃಷ್ಟಿಸಿದ ಹಿಂದೂ ಧರ್ಮವನ್ನು ಎದುರಿಸುವುದು ಭಾರತೀಯ ಸಾಹಿತ್ಯದಲ್ಲೇ ಅದ್ವಿತೀಯವಾದದು".೧೬ ಮೇಲಿನ ಹೇಳಿಕೆ ಕುವೆಂಪುರವರ ಸಮಗ್ರ ದಲಿತ ಚಿಂತನೆಯ ಪರಿಯನ್ನು ವಿವರಿಸುತ್ತದೆ. ಸಾಮಾಜಿಕ ಶ್ರೇಣಿ ಪದ್ದತಿಯಲ್ಲಿ ದಲಿತರು ಕೆಳಸ್ತರದವರಾಗಿ ಎಂತಹ ಕಟ್ಟುಪಾಡುಗಳ ಮಧ್ಯೆ ಬದುಕುತ್ತಿದ್ದಾರೆ ಮತ್ತು ಅವರ ಮೇಲೆ ಉಳಿಗಮಾನ್ಯ ಪದ್ದತಿ ಸೇರಿದಂತೆ ಸಮಾಜದ ಇತರ ಮೇಲ್ವರ್ಗದ ಜನರ

ದರ್ಪ ದೌರ್ಜನ್ಯಗಳು ಎಷ್ಟೊಂದು ಅಮಾನವೀಯತೆಯಿಂದ ಕೂಡಿವೆ ಎಂಬುದನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಕುವೆಂಪು ಅವರಂತೆ ಕನ್ನಡ ಸಾಹಿತ್ಯದ ಅನೇಕ ಕಾದಂಬರಿಕಾರರು ದಲಿತಪರವಾದ ಚಿಂತನೆಯನ್ನು ಪ್ರಮಾಣಿಕವಾಗಿ ಮಾಡಿದ್ದಾರೆ. ಇವರೆಲ್ಲರೂ ದಲಿತೇತರ ಲೇಖಕರು ಯು. ಆರ್. ಅಂನತಮೂರ್ತಿಯವರು ತಮ್ಮ 'ಭಾರತೀಪುರ' ಕಾದಂಬರಿಯಲ್ಲಿ ಚದುರಂಗರು 'ವೈಶಾಖ' ಕಾದಂಬರಿಯಲ್ಲಿ ದಲಿತರ ಬದುಕನ್ನು ವಾಸ್ತವವಾಗಿ ಚಿತ್ರಿಸಿದ್ದಾರೆ. ಚದುರಂಗರು ಕುವೆಂಪುರವರಂತೆ ಮಾನವೀಯ ಅಂತಃಕರಣದ ಮೂಲಕವೇ ದಲಿತ ಲೋಕವನ್ನು ಪ್ರವೇಶಿಸಿದ್ದಾರೆ. ಅವರ 'ಹೆಜ್ಜಾಲ' ಕಾದಂಬರಿಯಲ್ಲಿ ದಲಿತ-ಶೂದ್ರ ಲೋಕಗಳ ಸಮ್ಮಿಶ್ರ ಸಂವೇದನೆಯು ಜಾತ್ಯತೀತ ನೆಲೆಯಲ್ಲಿ ತೆರೆದುಕೊಂಡಿದೆ.

ಕುವೆಂಪುರವರ ಎರಡು ಕಾದಂಬರಿಗಳಲ್ಲಿನ ಪಾತ್ರಗಳನ್ನು ವಿದ್ಯಾವಂತ ಪಾತ್ರಗಳು ಹಾಗೂ ಅವಿದ್ಯಾವಂತ ಪಾತ್ರಗಳು ಎಂಬುದಾಗಿ ವಿಂಗಡಿಸಿಕೊಳ್ಳಬಹುದು. ವಿದ್ಯಾವಂತ ಪಾತ್ರಗಳು ವಸಾಹತು ಶಾಹಿಯ ವಿದ್ಯಾಭ್ಯಾಸ ಪದ್ಧತಿಯ ಸೌಲಭ್ಯವನ್ನು ಪಡೆದುಕೊಂಡು ಹೊಸ ವಿಚಾರಗಳಿಂದ ಮನಸ್ಸನ್ನು ವಿಶಾಲಗೊಳಿಸಿಕೊಂಡವರಾಗಿದ್ದಾರೆ. (ದೇವಯ್ಯ, ಮುಕುಂದಯ್ಯ, ಹೂವಯ್ಯ) ಈ ವಿದ್ಯಾವಂತ ಪಾತ್ರಗಳಲ್ಲಿ ವಿಕಾಸವಿದೆ ತಮ್ಮ ಹಾಗೆ ಇತರರು ಬದುಕಲಿ ಎಂಬ ಮಾನವೀಯ ಮೌಲ್ಯಗಳನ್ನು ಈ ಪಾತ್ರಗಳು ಹೊಂದಿವೆ. ಆದರೆ ಕೆಲವು ವೈದಿಕ ಮನಸ್ಸುಗಳಿಗೆ ಇಂತಹ ಪ್ರಗತಿಪರ ಆಲೋಚನೆಯ ದೃಷ್ಟಿ ಇಲ್ಲದಿರುವುದನ್ನು ಮೇಲೆ ತಿಳಿಸಲಾದ ಕೆಲವು ಕಾದಂಬರಿಗಳಲ್ಲಿ ಕಾಣಬುಹುದು.

ಅಂತಿಮವಾಗಿ ಮೇಲಿನ ಅಧ್ಯಯನಗಳಿಂದ ಪ್ರಮುಖವಾಗಿ ತಿಳಿದುಕೊಳ್ಳಬಹುದಾದ ಅಂಶಗಳೆಂದರೆ ದಲಿತ ಸಾಹಿತ್ಯವನ್ನು ರಚಿಸಲು ದಲಿತೇತರರು ಸಹ ಸಮರ್ಥವಾಗಿ ದಲಿತ ಚಿತ್ರಣವನ್ನು ನೀಡಬಲ್ಲರು ಎಂಬುದನ್ನು ಕುವೆಂಪು ಕಾದಂಬರಿಗಳ ಹಿನ್ನಲೆಯಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ನಡೆಸಲಾಗಿದೆ.

## ಉಲ್ಲೇಖಗಳು


**೧. ಹೆಚ್. ಎಸ್. ರಾಘವೇಂದ್ರ ರಾವ್ (ಸಂ)** : ಶತಮಾನದ ಸಾಹಿತ್ಯ ವಿಮರ್ಶೆ (ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು ೨೦೦೧) ೭೭೨

**೨. ಅರವಿಂದ ಮಾಲಗತ್ತಿ (ಸಂ)** : ನಾಲ್ಕು ದಲಿತೀಯ ಕಾದಂಬರಿಗಳು (ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೧) ೦೧.

**೩. ಆರ್. ವಿ. ಭಂಡಾರಿ** : ಹಿಂದೂ ಸಂಪ್ರದಾಯದಲ್ಲಿ ದಲಿತರು (ಲೇಖನ) (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦) ೧೪೫.

**೪. ಜಿ. ಬಿ. ವಿಸಾಜಿ** : ಕರ್ನಾಟಕದಲ್ಲಿ ದಲಿತರ ಸಮಸ್ಯೆಗಳು (ಲೇಖನ) (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦) ೧೩೭

**೫. ಸಿ. ವೀರಣ್ಣ** : ಸಾಹಿತ್ಯ ಮತ್ತು ಸಮುದಾಯ (ನವಕರ್ನಾಟಕ ಪಬ್ಲಿಕೇಷನ್ಸ್ , ಬೆಂಗಳೂರು, ೧೯೮೩) ೪೨.

**೬. ಕೆ. ಎಸ್. ಭಗವಾನ್** : ಕುವೆಂಪು ಯುಗ (ಸಹ್ಯಾದ್ರಿ ಪ್ರಕಾಶನ,ಮೈಸೂರು,೧೯೯೦) ೯೩.

೭. ಎಸ್. ಗಣೇಶನ್ : ಬೂಸಾ ಪ್ರಕರಣ ಬಸವಲಿಂಗಪ್ಪ ಬಲಿ (ಲೇಖನ) ಭಾನುವಾರ ೧೧ನೇ ಸೆಪ್ಟಂಬರ್ ೨೦೦೬ ಪ್ರಜಾವಾಣಿ

೮. ರಹಮತ್ ತರೀಕೆರೆ : ಪ್ರತಿ ಸಂಸ್ಕೃತಿ (ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೨) ೨೮.

೯. ದೇವನೂರ ಮಹಾದೇವ : ಸಂಕ್ರಮಣ ('ಬಂಡಾಯ ಸಾಹಿತ್ಯ' ವಿಶೇಷಾಂಕ) ೯೬

೧೦. ಸಿ. ವೀರಣ್ಣ : ಸಾಹಿತ್ಯ ಮತ್ತು ಸಮುದಾಯ (ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು. ೧೯೮೩) ೨೮.

೧೧. ಬರಗೂರು ರಾಮಚಂದ್ರಪ್ಪ : ಬಂಡಾಯ ಸಾಹಿತ್ಯ ಸ್ವರೂಪ (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೩) ೩೦.

೧೨. ಹೆಚ್. ಎಸ್. ರಾಘವೇಂದ್ರ ರಾವ್ (ಸಂ) : ಶತಮಾನದ ಸಾಹಿತ್ಯ ವಿಮರ್ಶೆ (ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು ೨೦೦೧) ೭೭೩.

೧೩. ಮೊಗಳ್ಳಿ ಗಣೇಶ್ : ದಲಿತ ಕಥನ ( ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬) ೧೬.

೧೪. ಎಸ್. ಎಲ್. ಭೈರಪ್ಪ : ದಾಟು (ಸಾಹಿತ್ಯ ಬಂಡಾರ,ಬಳೇಪೇಟೆ,ಬೆಂಗಳೂರು,೧೯೭೩) ೬೨೭.

೧೫. ಅರವಿಂದ ಮಾಲಗತ್ತಿ (ಸಂ) : ನಾಲ್ಕು ದಲಿತೀಯ ಕಾದಂಬರಿಗಳು ( ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೧ ) ೩

೧೬. ಮೊಗಳ್ಳಿ ಗಣೇಶ್ (ಸಂ) : ದಲಿತ ಕಥನ, ( ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬) ೦೯.

* * *

# ಅಧ್ಯಾಯ–೪

## ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿ ದಾಖಲಾಗಿರುವ ದಲಿತ ಜಗತ್ತಿನ ಸಾಮ್ಯ – ಭಿನ್ನತೆಗಳು

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ೧೯೨೦ರಿಂದ ಹೊಸ ಸಾಹಿತ್ಯಕ ಚಿಂತನೆಗಳು ಪ್ರಾರಂಭವಾದವು. ರಾಷ್ಟ್ರೀಯ ಮತ್ತು ಪ್ರಾಂತೀಯ ಆಂದೋಲನಗಳು ಹಿರಿಯರಲ್ಲಿ ಹಾಗೂ ಯುವ ಪೀಳಿಗೆಯಲ್ಲಿ ಹೊಸ ಆಸೆ–ಆಕಾಂಕ್ಷೆಗಳನ್ನು ಬಿತ್ತಿದ್ದವು. ಇವು ಯುವ ಜನಾಂಗದಲ್ಲಿ ನಾಡು ನುಡಿಯ ಬಗ್ಗೆ ಹೊಸ ಎಚ್ಚರವನ್ನು ಮೂಡಿಸಿತು. ಈ ಕಾರಣದಿಂದ ಕನ್ನಡದಲ್ಲಿ ಹೊಸ ಸಾಹಿತ್ಯ ಉದಯವಾಯಿತು. ಅಲ್ಲಿಯವರೆಗೂ ಕನ್ನಡ ಸಾಹಿತ್ಯ ಅನುವಾದಗಳಿಂದ ತುಂಬಿತ್ತು. ಭಾಷಾಂತರ ಕಾದಂಬರಿಗಳೇ ಈ ಸಂದರ್ಭದಲ್ಲಿ ಹೆಚ್ಚಾಗಿದವು. ಇವುಗಳ ತಂತ್ರ ಹಳೆಯ ಪದ್ಧತಿಯನ್ನು ಅನುಸರಿತ್ತು. ಇಂತಹ ಸಂದರ್ಭದಲ್ಲಿ ಕನ್ನಡದ ಅನೇಕ ಲೇಖಕರು ತಮ್ಮ ಪ್ರತಿಭೆಯಿಂದ ಸಾಹಿತ್ಯಕ್ಕೆ ಹೊಸ ದಿಕ್ಕನ್ನು ತೋರಿಸಲು ಪ್ರಾರಂಭಿಸಿದರು. ಪಾಶ್ಚತ್ಯರ ಆಗಮನ, ಅವರ ಸಂಸ್ಕೃತಿಯ ಸಂಪರ್ಕ ಹಾಗೂ ಪ್ರೇರಣೆಗಳಿಂದ ಹೊಸ ಬದುಕಿಗಾಗಿ ಇವರು ತುಡಿಯುತ್ತಿದ್ದರು. ಪಾಶ್ಚತ್ಯ ಶಿಕ್ಷಣ ಪದ್ಧತಿಯಿಂದ ಭಾರತೀಯ ಹಾಗೂ ಕನ್ನಡದ ಹಲವು ಲೇಖಕರು ಪ್ರಗತಿ ಪರವಾಗಿ ಚಿಂತಿಸಲು ಪ್ರಾರಂಭಿಸಿದರು.

ಈ ಚಿಂತನೆಗಳ ಫಲವಾಗಿ ಸಾಹಿತ್ಯಿಕವಾಗಿ ಎರಡು ರೀತಿಯ ಮನೋಧರ್ಮಗಳು ಲೇಖಕರಲ್ಲಿ ರೂಪುಗೊಂಡವು. ಮೊದಲನೆಯದು ಮೂಲಭೂತ ಸಂಪ್ರಾದಯಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಒಪ್ಪಿಕೊಂಡು ಅವುಗಳ ಅಸ್ತಿತ್ವಗಳಿಗಾಗಿ ಹೋರಾಟ ನಡೆಸುತ್ತಾ ಅದನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಜಾಣ್ಮೆಯಿಂದ ಬಳಸುವ ತಂತ್ರವನ್ನು ಒಂದು ವರ್ಗ ಕಂಡುಕೊಂಡಿತು. ಮತ್ತೊಂದು ಸಾಹಿತ್ಯ ಮಾಧ್ಯಮವನ್ನು ಸಾಮಾಜಿಕ ಪ್ರಗತಿಯ ಉದ್ದೇಶಗಳಿಗೆ ಬಳಸಿಕೊಂಡು ವೈಚಾರಿಕವಾಗಿ ಚಿಂತಿಸಿ ಆ ಮೂಲಕ ಸಮಾಜದಲ್ಲಿ ಜಾಗೃತಿಯನ್ನುಂಟುಮಾಡಲು ಸಾಧ್ಯವೆಂದು ತಿಳಿದು ಆ ನಿಟ್ಟಿನಲ್ಲಿ ಸಾಹಿತ್ಯ ರಚನೆಗೆ ಕೆಲವು ಲೇಖಕರು ತಮ್ಮನ್ನು ತೊಡಗಿಸಿಕೊಂಡರು.

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ದಲಿತ ಪ್ರಶ್ನೆಗಳನ್ನು ತೆಗೆದುಕೊಂಡು ಹಲವು ಪ್ರಗತಿಪರ ಲೇಖಕರು ತಮ್ಮ ಅಭಿಪ್ರಾಯ ಹಾಗೂ ಅನಿಸಿಕೆಗಳನ್ನು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. 'ಚೋಮನ ದುಡಿ' ಕಾದಂಬರಿಯ ಮುಖಾಂತರ ಕಾರಂತರು ದಲಿತ ಚಿತ್ರಣವನ್ನು ನೀಡಲು ಪ್ರಯತ್ನಿಸಿದ್ದಾರೆ. ಈ ಕಾಂಬರಿಯೂ ದಲಿತರ ನೈಜ ಚಿತ್ರಣವನ್ನು ನೀಡಿದರೂ ದಲಿತರ ಮೂಢನಂಬಿಕೆಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಲೇಖಕರು ಪ್ರಯತ್ನಿಸಿಲ್ಲ ಎಂಬ ಅಪವಾದವಿದೆ. ಅದರಂತೆ ಎಸ್. ಎಲ್. ಭೈರಪ್ಪನವರು 'ದಾಟು' ಕಾದಂಬರಿಯನ್ನು ದಲಿತ ಹಿನ್ನಲೆಯಲ್ಲಿ ಬರೆದಿದ್ದಾರೆ. ಈ ಕಾದಂಬರಿ ಸ್ವಲ್ಪ ಮಟ್ಟಿನ ದಲಿತಪರ ಚಿಂತನೆಯ ಆಶಯವನ್ನು ಒಳಗೊಂಡಿದೆ. ಆದರೆ ಪುರೋಹಿತ ಶಾಹಿಯ ಮೌಲ್ಯಗಳಿಗೆ ಹೆಚ್ಚಿನ ಮಹತ್ವವನ್ನು ನೀಡುವ ಭರದಲ್ಲಿ ಲೇಖಕರು ದಲಿತರ ಉದ್ಧಾರದ ಯಾವುದೇ ಸೂಚನೆಯನ್ನು ತಮ್ಮ ಕಾದಂಬರಿಯಲ್ಲಿ ಅಭಿವ್ಯಕ್ತಿಸಿಲ್ಲ. ಇದು ಸಂಪ್ರದಾಯವಾದಿಗಳ ಯಥಾಸ್ಥಿತಿವಾದವನ್ನು ಪ್ರತಿಪಾದಿಸುತ್ತದೆ. ಇಂತಹ ಸಾಹಿತ್ಯಿಕ ವಾತಾವರಣದ ನಡುವೆ ಕುವೆಂಪುರವರ ಬರಹಗಳು ದಲಿತ ಪ್ರಜ್ಞೆಯನ್ನು ಪ್ರಾಮಾಣಿಕವಾಗಿ ದಾಖಲಿಸುತ್ತವೆ.

ಕುವೆಂಪುರವರು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಮೇಲಿನ ಕಾದಂಬರಿಗಳ ಅಪೂರ್ಣತೆಯನ್ನು ಯಶಸ್ವಿಯಾಗಿ ತುಂಬಿಕೊಡುತ್ತಾರೆ. ಇವರ ಕೃತಿಗಳಾದ ಅಮಲನ ಕಥೆ, ಶೂದ್ರ ತಪಸ್ವಿ, ಬೆರಳ್‌ಗೆ

ಕೊರಳ್ ಜಲಗಾರ, ನಾಟಕಗಳು ಸಾಲದ ಮಗು ಕಥೆ ಹಾಗೂ ಕಾನೂರು ಸುಬಮ್ಮ ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳ ಮೂಲಕ ದಲಿತಪರ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಕುವೆಂಪುರವರು ತಮ್ಮ ಸಾಹಿತ್ಯ ಕೃತಿಗಳನ್ನು ಸಾಮಾಜಿಕ ಪರಿವರ್ತನೆಯ ಉದ್ದೇಶಗಳಿಗೆ ಒಂದು ಮಾಧ್ಯಮವಾಗಿ ಬಳಸಿಕೊಂಡರು.

ನವೋದಯ ಸಾಹಿತ್ಯ ರಚನೆಯ ಕಾಲದಲ್ಲಿ ಕುವೆಂಪುರವರು ಜಾತಿ ಪದ್ಧತಿಯ ಕಬಂದ ಬಾಹುಗಳಿಗೆ ಸ್ವತಃ ಒಳಗಾಗಿದ್ದವರು. ಅವರು ಸಾಹಿತ್ಯ ರಚನೆ ಮಾಡುವಂತಹ ಸಂದರ್ಭದಲ್ಲಿ ಶೂದ್ರ ಸಮುದಾಯಕ್ಕೆ ಸೇರಿದ ಪ್ರಥಮ ಲೇಖಕರಾಗಿದ್ದರು. ಅಂದಿನ ಸಂದರ್ಭದಲ್ಲಿ ಮೇಲ್ವರ್ಗದ ಲೇಖಕರಿಂದ ಅನೇಕ ಅವಮಾನ, ಟೀಕೆಗಳನ್ನು ಎದುರಿಸಿದರು. ಹಾಗೆಯೆ ಇವರ ಕೃತಿಗಳು ವಿನಾಕಾರಣ ಕಟುಟೀಕೆಗಳಿಗೆ ಗುರಿಯಾದವು. ಇದನ್ನು ಸೂಕ್ಷ್ಮವಾಗಿ ಗುರುತಿಸಿದ ಕುವೆಂಪುರವರು ಈ ಆಕ್ರಮಣಗಳಿಂದ ವಿಚಲಿತರಾಗದೆ ಶೂದ್ರ ನೆಲೆಯಿಂದಲೇ ಪುರೋಹಿತಶಾಹಿಯ ಬಿಗಿ ಹಿಡಿತಲ್ಲಿದ್ದ ಸಮಾಜವನ್ನು ಪರಿವರ್ತನೆಯ ಕಡೆಗೆ ಬದಲಾಯಿಸಲು ಶ್ರಮಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಸಮಾಜದ ಕೇಲವು ಅನಿಷ್ಠ ಪದ್ಧತಿಗಳನ್ನು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಖಂಡಿಸಿದರು. ಮೂಢನಂಬಿಕೆಗಳಿಗೆ ವೈಜ್ಞಾನಿಕವಾದ ಕಾರಣಗಳನ್ನು ನೀಡಿ ಆಚರಣೆಯಲ್ಲಿನ ದೋಷಗಳನ್ನು ಸಮಾಜಕ್ಕೆ ತಿಳಿಸದರು. ಧರ್ಮದ ಹೆಸರಿನ್ನಲ್ಲಿ ನಡೆಯುತ್ತಿದ್ದ ಶೋಷಣೆಯನ್ನು ಬಯಲು ಮಾಡಿದರು. ಇದಕ್ಕೆ ತಮ್ಮ ಸ್ವಂತ ಅನುಭವಗಳು ಹಾಗೂ ಹೆಚ್ಚಿನ ಓದಿನ ಮೂಲಕ ತಾವು ಗಳಿಸಿದ ಪ್ರಜ್ಞೆಯನ್ನೇ ಸಾಹಿತ್ಯಕ್ಕೆ ಪ್ರೇರಣೆಯಾಗಿ ಬಳಸಿಕೊಂಡರು. ಜೊತೆಗೆ ಆಗಿನ ಸಂದರ್ಭದಲ್ಲಿ ನಡೆಯುತ್ತಿದ್ದ ಚಳುವಳಿಯ ಪರಿಣಾಮಗಳನ್ನು ಗಮನಿಸಿದ್ದರು.

ಕುವೆಂಪುರವರು ಸಾಹಿತ್ಯ ರಚನೆ ಮಾಡುವ ಹೊತ್ತಿಗೆ ನಮ್ಮ ದೇಶದಲ್ಲಿ ವಿವಿಧ ಚಳುವಳಿಗಳು ಪ್ರಾರಂಭವಾಗಿದ್ದವು ಸ್ವಾತಂತ್ರ್ಯ ಚಳುವಳಿ, ಗಾಂಧೀ ಚಳುವಳಿ, ಹಿಂದುಳಿದ ವರ್ಗಗಳ ಚಳುವಳಿ ಇತ್ಯಾದಿ ಚಳುವಳಿಗಳು ಸಮಾಜದ ಏಳಿಗೆಗಾಗಿ ಶ್ರಮಿಸಿಸುತ್ತಿದ್ದವು. ಪ್ರಗತಿಪರ ಲೇಖಕರು ಈ ಚಳುವಳಿಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಹಿಂದುಳಿದ ವರ್ಗಗಳ ಚಳುವಳಿಗಳಲ್ಲಿ ಯಶಸ್ವಿಯಾದ ಮಧ್ಯಮವರ್ಗದವರು ಅವರಿಗಿಂತ ಕೆಳಗಿದ್ದ ಇನ್ನೂ ಹಿಂದುಳಿದ್ದ ವರ್ಗಗಳ ಬಗ್ಗೆ ಗಮನ ಹರಿಸಲಿಲ್ಲ, ಗಮನಹರಿಸಿದರೂ, ಸ್ವಾರ್ಥದಿಂದ ತಾವು ಗಳಿಸಿದ ಸವಲತ್ತುಗಳನ್ನು ಕೆಳಗಿನ ಸ್ತರದವರಿಗೆ ವಿತರಣೆ ಮಾಡುವಷ್ಟು ಉದಾರಿಗಳಾಗಿರಲ್ಲಿಲ್ಲ. ಈ ಧಮನಕಾರಿ ನೀತಿಯನ್ನು ಕುವೆಂಪುರವರು ಸೂಕ್ಷ್ಮವಾಗಿ ಗಮನಿಸಿದ್ದರು. ಈ ಸಮಗ್ರ ಸಾಂಸ್ಕೃತಿಕ ಕ್ರಾಂತಿಗೆ ಎಲ್ಲಾ ಜನರ ಸಹಭಾಗಿತ್ವದ ಅವಶ್ಯಕತೆಯನ್ನು ಅವರು ಮನಗಂಡಿದ್ದರು. ಈ ಕಾರಣಕ್ಕಾಗಿ ಕುವೆಂಪುರವರು ಪುರಾಣ ಪಾತ್ರಗಳನ್ನು ಪುನರ್‌ಸೃಷ್ಟಿಸಿ ಮೂಲಭೂತವಾದಿಗಳು ಮಾಡಿದ್ದ ತಪ್ಪಿಗೆ ನ್ಯಾಯ ಒದಗಿಸಿದರು.

ಕುವೆಂಪುರವರು ತಮ್ಮ ಸಾಹಿತ್ಯ ಕೃತಿಗಳ ರಚನೆಗೆ ಒಂದು ವಿಶಿಷ್ಟ ಮಾದರಿಯನ್ನು ರಚಿಸಿಕೊಂಡಿದ್ದರು. ಇದರ ಮೂಲಕ ದಲಿತ ಸಮುದಾಯವನ್ನು ಭಿನ್ನ ದೃಷ್ಟಿಕೋನದಿಂದ ಪುನರ್‌ಸೃಷ್ಟಿಸಿದರು. ರಾಮಯಾಣದಲ್ಲಿ ಶೂದ್ರ ಶಂಭೂಕನಿಗೆ ಒದಗಿದ ದುಃಸ್ಥಿಯನ್ನು ಅರಿತು ಅದರಿಂದ ಶೂದ್ರ ಸಮುದಾಯಗಳ ಮೇಲೆ ಉಂಟಾಗಿದ್ದ ಅವಮಾನವನ್ನು ನಿವಾರಿಸಲು 'ಶೂದ್ರತಪಸ್ವಿ' ಎಂಬ ನಾಟಕವನ್ನು ರಚಿಸಿದರು. ಕುವೆಂಪುರವರು ಶಂಭೂಕ, ಏಕಲವ್ಯ, ಜಲಗಾರ ಇವರ ದಲಿತ ನೆಲೆಯ ಪರಿಪೂರ್ಣವಾದ ಚಿತ್ರಣವನ್ನು ಕೊಡಲಾಗದಿದ್ದರು. ತಮ್ಮ ಸೃಜನಶೀಲ ಶಕ್ತಿಯಿಂದ ಪ್ರಮಾಣಿಕವಾಗಿ ದಲಿತರನ್ನು ಚಿತ್ರಿಸಲು ಪ್ರಯತ್ನಿಸಿದರು. ಈ ಮೂರು ದಲಿತ ಪಾತ್ರಗಳು ಆಧುನಿಕ ಭಾರತೀಯ ಸಾಹಿತ್ಯದಲ್ಲೆ

ಶ್ರೇಷ್ಠವಾದ ದಲಿತ ಪ್ರತಿನಿಧಿಗಳು. ಇವರನ್ನು ಸೃಷ್ಟಿಸಿದ ವಿಭಿನ್ನ ದೃಷ್ಠಿಕೋನ ಬೇರೊಬ್ಬ ಲೇಖಕನಿಂದ ಕಷ್ಟವಾಗಬಹುದು. ಸಿದ್ದಲಿಂಗಯ್ಯನವರ 'ನನ್ನ ಜನರು' ಕವಿತೆಯಲ್ಲಿ ದಲಿತ ಸಂವೇಧನೆ ರೂಪಗೊಂಡಿರುವಷ್ಟು ಗಾಢವಾಗಿ ಕುವೆಂಪುರವರು ದಲಿತ ಪಾತ್ರಗಳನ್ನು ಸೃಜಿಸಿದ್ದಾರೆ. ಇಂತಹ ರಚನೆಗಳ ಮೂಲಕ ಇತಿಹಾಸ, ಪುರಾಣಗಳ ಜಡ ಮಾದರಿಗಳನ್ನು ತಿರಸ್ಕರಿಸಿ ಹೊಸ ಚಲನಶೀಲ ಗುಣಗಳಿಗೆ ಪ್ರೇರಣೆ ನೀಡಿದರು. ಅವರ ಬಹುಭಾಗ ಸಾಹಿತ್ಯ ಜಡ ಮಾದರಿಗಳಿಂದ ಮುಕ್ತವಾಗಿದೆ.

ದಲಿತ ನೆಲೆಯಲ್ಲಿ ನಿಂತು ಅವರ ಪ್ರಜ್ಞೆಯ ಬೆಳಕಿನಲ್ಲಿ ದಲಿತ ಲೋಕವನ್ನು ಸ್ವತಃ ದಲಿತ ವಿವೇಕದಿಂದ ದಲಿತರ ಚಿತ್ರಣವನ್ನು ನೀಡಿದ ಲೇಖಕರ ಸಂಖ್ಯೆ ಕಡಿಮೆ. ಆದರೆ ಕುವೆಂಪುರವರು ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಶಂಭೂಕನ ಪಾತ್ರದ ಮೂಲಕ ಕುವೆಂಪುರವರು ದಲಿತ ಜಗತ್ತನ್ನು ಪ್ರವೇಶಿಸಿ ಅಲ್ಲಿನ ಅನುಭವಗಳ ಸಹಾಯದಿಂದ ಬ್ರಾಹ್ಮಣ ಮುನಿಯ ಪ್ರಜ್ಞೆಯನ್ನು ಎಚ್ಚರಿಸುತ್ತಾರೆ. ಹೀಗೆ ಎಚ್ಚರಿಸುವಾಗ ಅವರು ಜಾತಿ ಜಾತಿಗಳ ನಡುವೆ ವೈಷಮ್ಯವನ್ನು ಉಂಟುಮಾಡುವುದಿಲ್ಲ. ಜಾತಿಯ ತಾರತಮ್ಯವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪ್ರಮಾಣಿಕ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. ಈ ಕಾರಣಕ್ಕಾಗಿ ಕುವೆಂಪುರವರು ವೈಚಾರಿಕವಾಗಿ ಆಕ್ರೋಶವನ್ನು ವ್ಯಕ್ತಪಡಿಸಿದರೂ, ಸೃಜನಶೀಲಧ್ಯಾನದಲ್ಲಿ ಪರಿಪಕ್ವ ಮಾನವತ್ವವನ್ನೆ ಪ್ರತಿಪಾದಿಸುತ್ತಾರೆ. ಏಕಲವ್ಯ ಜ್ಞಾನದ ದಿಗ್ವಿಜಯವನ್ನು ಸಾಧಿಸುವುದು ಇಂತಹ ಧ್ಯಾನದಿಂದಲೇ, ಶಂಭೂಕ ಕೂಡ ಇದೆ ನೆಲೆಯಲ್ಲಿ ಜ್ಞಾನದ ಸರ್ವಭಂಗ ಮಾಡುತ್ತಾನೆ. ಜಲಗಾರ ಇದೇ ದಾರಿಯಲ್ಲಿ ವೈದಿಕ ಶಾಹಿಯ ಅಹಂಕಾರವನ್ನು ಮುರಿಯುತ್ತಾನೆ. ಪ್ರೇಮಚಂದ್‌ರವರು ಕುವೆಂಪುರವರಂತಹ ಎತ್ತರದ ಲೇಖಕರಲ್ಲೆ ಒಬ್ಬರು ಇವರು ಗ್ರಾಮೀಣ ಪರಿಸರದ ದಲಿತಲೋಕವನ್ನು ಕುವೆಂಪುರವರಂತೆ ದಲಿತಪರ ಕಾಳಜಿ ನೆಲೆಯಲ್ಲಿ ದಲಿತರ ಜಗತ್ತನ್ನು ತಮ್ಮ ಕಥೆಗಳಲ್ಲಿ ದಾಖಲಿಸಿದ್ದಾರೆ. ಜಗತ್‌ಪ್ರಸಿದ್ದ ಕವಿಯಾಗಿದ್ದ ರವೀಂದ್ರನಾಥ ಠಾಗೂರ್ ಅವರಿಗೆ ಇಂತಹ ಅಂತಕರಣದ ರೂಪಕಗಳು ಸಾಧ್ಯವಾಗಲಿಲ್ಲ ಎನ್ನುವುದು ವಿಪರ್ಯಾಸ.

ಕುವೆಂಪುರವರ ಕಾನೂರು ಹೆಗ್ಗಡತಿ ಮತ್ತು ಮಲೆಗಳಲ್ಲಿ ಮಧುಮಗಳು ಕಾದಂಬರಿಗಳು ಮಲೆನಾಡಿನ ಗ್ರಾಮೀಣ ಬದುಕನ್ನು ಚಿತ್ರಿಸುತ್ತದೆ. ಈ ಕಾದಂಬರಿಗಳಲ್ಲಿ ಒಕ್ಕಲಿಗರ ಬದುಕು ಪ್ರಧಾನವಾಗಿ ಬಂದರೂ, ಅದಕ್ಕೆ ಪೂರಕವಾಗಿ ದಲಿತರು, ಮುಸ್ಲಿಂರು ಮತ್ತು ಕ್ರಿಶ್ಚಿಯನ್ ಸಮುದಾಯಗಳ ಬದುಕು ಸಹ ಸಹಜವಾಗಿ ಚಿತ್ರಿವಾಗಿವೆ. ಈ ವಿಭಿನ್ನ ಬದುಕಿನ ಚಿತ್ರಣಗಳನ್ನು ಸಮಗ್ರವಾಗಿ ಓದುಗರಿಗೆ ನೀಡಲು ಕುವೆಂಪುರವರು ಬಹಳಷ್ಟು ಶ್ರಮಿಸಿರಬೇಕು. ಇದಕ್ಕೆ ಅವರು ಆ ಬದುಕುಗಳ ಒಳಗೆ ಪರಕಾಯ ಪ್ರವೇಶ ಮಾಡಬೇಕಾಯಿತು. ಹೀಗೆ ಪರಕಾಯ ಪ್ರವೇಶ ಮಾಡಿದ ತಕ್ಷಣ ಅಲ್ಲಿನ ಜೀವನ ವಿವರಗಳು ಸಮಗ್ರವಾಗಿ ಗೋಚರಿಸುವುದಿಲ್ಲ ಅಂತಹ ಪ್ರವೇಶ ಮಾಡಿದ ಕುವೆಂಪುರವರಿಗೆ ಮಾನವೀಯತೆ ಹಾಗೂ ಸೃಜನಶೀಲ ದರ್ಶನ ಇದ್ದುದ್ದರಿಂದ ಜಾತಿ, ಮತ, ಧರ್ಮಗಳ ಎಲ್ಲೇಯನ್ನು ಮೀರಲು ಸಾಧ್ಯವಾಯಿತು. ಅದ್ದರಿಂದ ಕುವೆಂಪುರವರು ಹಿಂದೂ ಧರ್ಮದಲ್ಲಿ ಜಾತ್ಯತೀತವಾಗಿ ಪರಕಾಯ ಪ್ರವೇಶ ಮಾಡಿ ಅಲ್ಲಿನ ಮತ ಮೌಢ್ಯವನ್ನು ಬಯಲು ಮಾಡಿದರು. ಹಾಗೆಯೇ ಅವರಿಗೆ ದಲಿತ ಜಗತ್ತಿನ ಬಗ್ಗೆ ಆಗಾಧವಾದ ಅನುಭವವಿತ್ತು. ಕುವೆಂಪುರವರು ಮೈಸೂರಿನಲ್ಲಿದ್ದರೂ, ಆಗಾಗ ಬಿಡುವಿನ ದಿನಗಳಲ್ಲಿ ಮಲೆನಾಡಿನಲ್ಲಿ ಸುತ್ತುತ್ತಿದ್ದರಿಂದ ಮತ್ತು ಮನೆಯ ಸ್ನೇಹಿತರೊಂದಿಗೆ, ಸೋದರರೊಂದಿಗೆ, ಕೂಲಿಯಾಳುಗಳು, ಜೀತದಾಳುಗಳೊಂದಿಗೆ ಆತ್ಮೀಯವಾಗಿ ಬೆರೆಯುತ್ತಿದ್ದರು. ಇವರು ಹೇಳಿದ ವಿವರಗಳನ್ನು ಸಂಗ್ರಹಿಸಿ ತಮ್ಮ ಕೃತಿಗಳಲ್ಲಿ ಸೃಜನಾತ್ಮಕವಾಗಿ ಬಳಸಿಕೊಂಡಿದ್ದಾರೆ.

ಜೀವನದಲ್ಲಿ ಸ್ವತಃ ತಾವು ಅನುಭವಿಸಿದ ಘಟನೆಗಳ ಆಧಾರದ ಮೇಲೆಯೂ ತಮ್ಮ ಕೃತಿಗಳನ್ನು ಮಹತ್ವಪೂರ್ಣವಾಗಿ ರಚಿಸಿದ್ದಾರೆ. ಕುವೆಂಪುರವರು ದಲಿತ ಜಗತ್ತಿನ ಚಿತ್ರಣವನ್ನು ನೀಡುವಾಗ ಅವರ ಪರವಾಗಿ ವಾದಿಸದೆ ಸ್ವತಃ ಅವರಿಂದಲೇ ಹೇಗೆ ಹಿಂದೂತ್ವದ ಮಲಿನತೆಯನ್ನು ಹೋಗಲಾಡಿಸಬಹುದು ಎಂಬುದರ ಬಗ್ಗೆ ಚಿಂತಿಸಿದ್ದಾರೆ.

ಅದರಂತೆ ಕುವೆಂಪುರವರು ಜಮೀನ್ದಾರ ಮನೆತನದಿಂದ ಬಂದಿದ್ದರು ತಮ್ಮ ಕೃತಿಗಳಲ್ಲಿ ಒಕ್ಕಲಿಗರ ಪರವಾಗಿ ಯಾವುದೇ ಘಟನೆಯನ್ನು ಚಿತ್ರಿಸುವುದಿಲ್ಲ. ಬದಲಿಗೆ ಒಕ್ಕಲಿಗ ಸಮುದಾಯದ ದೌರ್ಜನ್ಯಗಳನ್ನು ಈ ಕಾದಂಬರಿಗಳಲ್ಲಿ ಅನಾವರಣ ಮಾಡಿದ್ದಾರೆ. ಮೇಲಿನ ಎರಡು ಕಾದಂಬರಿಗಳಲ್ಲಿ ಮನುಷ್ಯನ ಬದುಕನ್ನು ಹಸನುಗೊಳಿಸುವ ಉದ್ದೇಶವೆ ಪ್ರಧಾನವಾಗಿದೆ. ಹಾಗೆಯೆ ವ್ಯವಸ್ಥೆಯ ಲಾಭ ಪಡೆದು ಮೈದಣಿಯದೆ ಬದುಕಬಯಸುವ ಪುರೋಹಿತ ಶಾಹಿಗಳ ಸ್ವಾರ್ಥದ ವಿರುದ್ಧ ಧ್ವನಿಯನ್ನು ಇಲ್ಲಿ ಕಾಣಬಹುದಾಗಿದೆ. ಕುವೆಂಪುರವರು ಬರಿ ಸಮಸ್ಯೆಗಳಿಗೆ ಮಾತ್ರ ಪ್ರಾಧನ್ಯತೆಯನ್ನು ನೀಡಿಲ್ಲ. ಮಾನವನ ನಿತ್ಯ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ಪ್ರೀತಿ, ಪ್ರೇಮ, ಪ್ರಣಯ, ವಾತ್ಸಲ್ಯ ಭಾವಗಳು ಸೇರಿದಂತೆ ಸಾಮಾನ್ಯ ಜೀವಿಗಳಲ್ಲಿರುವ ಅಸಾಮಾನ್ಯ ಶಕ್ತಿ ಹಾಗೂ ಅಸಾಮಾನ್ಯ ವ್ಯಕ್ತಿಗಳ ಸಣ್ಣತನಗಳನ್ನು ದಾಖಲಿಸಿದ್ದಾರೆ.

ಜಾತಿ ಮತ್ತು ಶೋಷಣೆಯ ವಿಚಾರಗಳು ಕುವೆಂಪು ಕಾದಂಬರಿಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತವೆ. ಬ್ರಾಹ್ಮಣರು ಸಮಾಜದಲ್ಲಿ ಮೇಲ್ವರ್ಗದವರು. ಅವರು ಕೊಳಕರಾಗಿರಲಿ, ಚೋರರಾಗಿರಲಿ ಅವರಿಗೆ ಸಮಾಜದಲ್ಲಿ ಅಗ್ರ ಮರ್ಯಾದೆ, ಬ್ರಾಹ್ಮಣ ವರ್ಗಕ್ಕಿಂತ ಕೆಳಗಿನ ಸ್ತರದವರು ಗೌಡರು, ಅವರ ಬಳಿ ಜೀತಮಾಡುವ ಹೊಲೆಯರು, ದೀವರು, ಬಿಲ್ಲವರು ಮುಂತಾದ ದಲಿತರು ಪ್ರಾಣಿಗಳಿಗಿಂತ ಕೀಳಾಗಿ ಜೀವನ ನಡೆಸುತ್ತಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಇನ್ನೂ ಜೀತದಾಳುಗಳಲ್ಲೆ ಪರಸ್ಪರ ಮಡಿ-ಮೈಲಿಗೆ ದೀವರು ಗೌಡರುಗಳ ಮನೆಗೆ ಹೋಗುವಂತಿಲ್ಲವಾದರೆ, ದೀವರ ಮನೆಗೆ ಬಿಲ್ಲವರು ಹೋಗುವಂತಿಲ್ಲ. ಹಾಗೆಯೇ ಬಿಲ್ಲವರ ಮನೆಗೆ ಹೊಲೆಯನ ಪ್ರವೇಶ ನಿಷೇದ. ಉದರ ಪೋಷಣೆಗಾಗಿ ಹೊರಗಿನಿಂದ ಬಂದ ಸಾಬರು ಇಲ್ಲಿಯ ಮತ್ತೊಂದು ಶೋಷಕವರ್ಗ. ತಮ್ಮ ಕಾರ್ಯದಿಂದ ಬಡವರನ್ನು, ಆಶಕ್ತರನ್ನು ಮುಗ್ಧರನ್ನು ಹಿಂಸಿಸುತ್ತಾರೆ. ತಮ್ಮ ಒಡೆಯರಿಗಾಗಿ ವಸೂಲು ಮಾಡುವ ಸಾಲದ ಜೊತೆಗೆ ಹೆದರಿಸಿ, ಬೆದರಿಸಿ ತಮ್ಮ ಮಾಮೂಲನ್ನು ವಸೂಲು ಮಾಡಿಕೊಳ್ಳುವ ಚಾಣಾಕ್ಷರು. ವ್ಯಾಪಾರದಲ್ಲಿ ಮೋಸ, ಕಳವು, ದರೋಡೆ ಮತ್ತು ಅತ್ಯಾಚಾರಗಳಂತಹ ಹೀನಕಾರ್ಯಗಳಲ್ಲಿ ಪಳಗಿದವರು. ರಾಜಕಾರಣ ಮತ್ತು ವ್ಯಾಪರಕ್ಕಾಗಿ ವಿದೇಶಗಳಿಂದ ಬಂದ ಕ್ರೈಸ್ತಪಾದ್ರಿಗಳು ಮಲೆನಾಡಿನ ಜನರ ಮುಗ್ದತೆಯನ್ನು ಬಂಡವಾಳ ಮಾಡಿಕೊಂಡು ಅವರ ಜಾತಿ, ಆಚಾರ-ವಿಚಾರಗಳನ್ನು ಹೀಗಳೆದು ಹಲವಾರು ಅಮಿಷಗಳನ್ನೊಡ್ಡಿ ತಮ್ಮ ಧರ್ಮವನ್ನು ಮಲೆನಾಡಿನಲ್ಲಿ ಸ್ಥಾಪಿಸಲು ಪ್ರಯತ್ನಿಸುತ್ತಿದ್ದಾರೆ. ಈ ಎಲ್ಲಾ ಜಾತಿಗಳ ಅಂತರಂಗವನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಪರಿಣಾಮಕಾರಿಯಾಗಿ ದಾಖಲಿಸಿದ್ದಾರೆ.

ಮಲೆನಾಡಿನಲ್ಲಿ ಒಡೆಯ-ಜೀತದಾಳು, ಸವರ್ಣಿಯ-ಅಸ್ಪೃಶ್ಯ, ಗಂಡು-ಹೆಣ್ಣು ಇತ್ಯಾದಿ ಸಂಬಂಧಗಳನ್ನು ಕುರಿತು ಕುವೆಂಪು ಸಾಹಿತ್ಯವು ಸಮೃದ್ಧವಾದ ಮಾಹಿತಿಯನ್ನು ನಮಗೆ ಕೊಟ್ಟಿದೆ. ಭೂಮಾಲಿಕರ ಕ್ರೌರ್ಯದ ಬಗೆಗಿನ ಅವರ ಚಿತ್ರಣ ವಾಚಕರ ಅಂತಃಕರಣವನ್ನು ಕಲಕಿಬಿಡುತ್ತದೆ. ಅಂದಿನ ದಲಿತರ ಹಲವು ಸಮಸ್ಯೆಗಳನ್ನು ಈ ಕಾದಂಬರಿಗಳು ಸಮಗ್ರವಾಗಿ ಚಿತ್ರಿಸುತ್ತವೆ. ಈ ಸಂಪ್ರಂಬಧದಲ್ಲಿ ನಾನು ಕುವೆಂಪುರವರ ದಲಿತ ಜಗತ್ತಿನ ಚಿತ್ರಣದ ಅಧ್ಯಯನ ನಡೆಸಬೇಕಾಗಿರುವುದರಿಂದ, ದಲಿತರ ಸಮಸ್ಯೆಗಳನ್ನು ಅಧ್ಯಯನ ದೃಷ್ಟಿಯಿಂದ ಈ ಕೆಳಗಿನಂತೆ ಗುರುತಿಸಿದ್ದೇನೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ದಲಿತ ಸಮಸ್ಯೆಯನ್ನು ಹಲವಾರು ನೆಲೆಗಳಲ್ಲಿ ಚಿತ್ರಿಸಿದ್ದಾರೆ. ಜಾತಿ, ಮತಾಂತರ, ಜೀತಪದ್ಧತಿ, ಅಸ್ಪೃಶ್ಯತೆ ಮುಂತಾದ ನೆಲೆಗಳಲ್ಲಿ ದಲಿತರು ಅನುಭವಿಸುವ ಅಮಾನವೀಯ ಚಿತ್ರಣವನ್ನು ದಾಖಲಿಸಿದ್ದಾರೆ. ಇಂತಹ ಸಮಸ್ಯೆಗಳು ದಲಿತ ಕಾದಂಬರಿಗಳಲ್ಲಿಯು ಸಹ ಕಾಣಿಸಿಕೊಂಡಿವೆ. ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ದಲಿತ ಸಮಸ್ಯೆಗಳನ್ನು ಹಲವಾರು ನೆಲೆಗಳಲ್ಲಿ ಚಿತ್ರಿಸಿದ್ದಾರೆ. ಜಾತಿ, ಮತಾಂತರ, ಜೀತಪದ್ಧತಿ, ಅಸ್ಪೃಶ್ಯತೆ ಮುಂತಾದ ನೆಲೆಗಳಲ್ಲಿ ದಲಿತರು ಅನುಭವಿಸುವ ಅವಮಾನಗಳನ್ನು ದಾಖಲಿಸಿದ್ದಾರೆ. ಇಂತಹ ಸಮಸ್ಯೆಗಳು ದಲಿತ ಕಾದಂಬರಿಗಳಲ್ಲಿಯು ಸಹ ಕಾಣಿಸಿಕೊಂಡಿವೆ. ಕುವೆಂಪುರವರು ದಲಿತೇತರರಾಗಿ ದಲಿತ ಜಗತ್ತನ್ನು ಚಿತ್ರಿಸಿರುವುದರಿಂದ ಕೆಲವು ಮೂಲಭೂತವಾದಿ ದಲಿತ ಚಿಂತಕರು ಕೆಲವು ಆಕ್ಷೇಪಣೆಗಳನ್ನು ಎತ್ತಿದ್ದಾರೆ. ಕುವೆಂಪು ಅವರು "ಒಡೇರ ದಿಣ್ಣೆ ಮೇಲೆ ನಿಂತು ದಲಿತರ ಬದುಕನ್ನು ನೋಡಲು ಸಾಧ್ಯವೇ ಹೊರತು ಹೊಲೆಯರ ಗುಡಿಸಲಿನಲ್ಲಿ ಕುಳಿತು ನೋಡಲಾರರು" (ಬಿ.ಕೃಷ್ಣಪ್ಪ : ೨೦೦೨ : ೭೨ ) ಎಂಬ ಅಭಿಪ್ರಾಯಗಳಿವೆ. ಈ ಅಭಿಪ್ರಾಯಗಳ ಸತ್ಯಾ-ಸತ್ಯತೆಯನ್ನು ದಲಿತ ಕಾದಂಬರಿಗಳೊಂದಿಗೆ ಹೋಲಿಸಿ ಮೇಲಿನ ಹೇಳಿಕೆ ಸರಿಯೇ? ಅಥವಾ ತಪ್ಪೇ? ಎಂಬ ನಿರ್ಣಯವನ್ನು ಮಂಡಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ. ಈ ಕಾರಣಕ್ಕಾಗಿ ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ದಲಿತ ಸಮಸ್ಯೆಗಳನ್ನು ಈ ಕೆಳಗಿನಂತೆ ವಿಭಾಗಿಸಿಕೊಳ್ಳಲಾಗಿದೆ.

೧. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಯ ಅಂಶಗಳು

೨. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಮತಾಂತರ ಸಮಸ್ಯೆಗಳು

೩. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಲೈಂಗಿಕ ಶೋಷಣೆಯ ಸ್ವರೂಪ

೪. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಜೀತ ಪದ್ಧತಿಯ ಅಮಾನವೀಯ ವರ್ತನೆಗಳು

೫. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಗ್ರಾಮೀಣ ನ್ಯಾಯ ವ್ಯವಸ್ಥೆ

ಈ ಮೇಲಿನ ನೆಲೆಗಳನ್ನು ತೆಗೆದುಕೊಂಡು ಇದು ದಲಿತ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಬಗೆ, ಹಾಗೂ ಕಾದಂಬರಿಗಳಾದ ಮಲೆಗಳಲ್ಲಿ ಮದುಮಗಳು ಮತ್ತು ಕಾನೂರು ಹೆಗ್ಗಡತಿಗಳಲ್ಲಿ ದಾಖಲಾಗಿರುವ ರೀತಿಯನ್ನು ಈ ಕೆಳಗಿನಂತೆ ತಿಳಿದುಕೊಳ್ಳಬಹುದು.

**೧. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿ ಅಸ್ಪೃಶ್ಯತೆಯ ~~ಸಮಸ್ಯೆಗಳು~~ ಅಂಶಗಳು :** ಹಿಂದೂ ಧರ್ಮದ ಮೂಲಭೂತವಾದಿಗಳು ಅನೇಕ ನಿರ್ಬಂಧಗಳ ಮೂಲಕ ದಲಿತ ಜಗತ್ತನ್ನು ನಿಯಂತ್ರಿಸುತ್ತಿದ್ದರು. ಇಂತಹ ನಿರ್ಬಂಧಗಳಲ್ಲಿ ಜಾತಿ ಪದ್ಧತಿಯ ಆಚರಣೆ ಅಸ್ಪೃಶಯತೆಯ ಆಚರಣೆ ಮುಖ್ಯವಾದುವು. ವರ್ಣ-ವರ್ಗದ ನೆಲೆಯಲ್ಲಿ ಈ ಪದ್ಧತಿಯನ್ನು ಆಚರಿಸಲಾಗುತ್ತಿತ್ತು. ಇದರಿಂದ ಸಮಾಜದಲ್ಲಿ ಮೇಲು-ಕೀಳು ಎಂಬ ಭೇದವನ್ನು ಬಿತ್ತಲಾಯಿತು. ಸಮಾಜದಲ್ಲಿನ ಜೀವನ ವಿಧಾನ ಹಾಗೂ ಆಹಾರ ಪದ್ದತಿಯ ಆಧಾರದ ಮೇಲೆ ಅಸ್ಪೃಶ್ಯರನ್ನು ವಿಂಗಡಿಸಲಾಗುತ್ತದೆ. ಈ ಪದ್ಧತಿಯ ಆಚರಣೆಯನ್ನು ಕುವೆಂಪು ಕಾದಂಬರಿಗಳನ್ನು ಒಳಗೊಂಡಂತೆ ಹಲವು ದಲಿತ ಕಾದಂಬರಿಗಳಲ್ಲಿಯು ನೋಡಬಹುದು. ಕುವೆಂಪು ಚಿತ್ರಿಸಿರುವ ದಲಿತಪಾತ್ರಗಳು ಅವಿದ್ಯಾವಂತರವು. ಇಲ್ಲಿ ಬರುವ ದಲಿತರು ಶ್ರಮಜೀವಿಗಳು ಮುಗ್ದರು, ಇವರಿಗೆ ಶೋಷಣೆಗಳ ಅರಿವು ಇಲ್ಲ, ಹಾಗೆಯೇ ಈ ಪಾತ್ರಗಳಿಗೆ ಮೇಲ್ವರ್ಗದವರೊಡನೆ ಯಾವುದೇ ಸಂಘರ್ಷವಿಲ್ಲದೆ ಹೊಂದಿಕೊಂಡು ಅವರ ಆಶ್ರಯದಲ್ಲಿ ಜೀವನ ನಡೆಸುತ್ತವೆ. ಆದರೆ ದಲಿತ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ

ಪಾತ್ರಗಳು ಸಂಘರ್ಷದ ಸ್ವರೂಪವನ್ನು ಹೊಂದಿವೆ. ಇವು ಅಸ್ಪೃಶ್ಯತೆಯ ಆಚರಣೆಯನ್ನು ಖಂಡಿಸುತ್ತವೆ.

ಮಲೆನಾಡಿನಲ್ಲಿ ಸವರ್ಣೀಯರು ಎದುರಿನಿಂದ ಬರುತ್ತಿದ್ದರೆ. ಕೂಲಿಯಾಳುಗಳು ಮತ್ತು ಜೀತದಾಳುಗಳು ಹೊಟ್ಟೆ ಅಡಿಯಾಗಿ ಮಣ್ಣು ಹಣೆ ಮುಟ್ಟುವಂತೆ ಎಲ್ಲೆಂದರೆ ಅಲ್ಲೆ ಅವರಿಗೆ ದೀರ್ಘದಂಡ ಸಮಸ್ಕಾರವನ್ನು ಮಾಡುತ್ತಿದ್ದ ರೀತಿಯನ್ನು ಕುವೆಂಪುರವರು ಚಿತ್ರಿಸುತ್ತಾರೆ. ಹಾಗೆಯೇ ಮತ್ತೊಂದು ಪ್ರಸಂಗದಲ್ಲಿ ಸುಬ್ಬಣ್ಣ ಹೆಗ್ಗಡೆಯವರು ಹಂದಿಯ ಗುರುತನ್ನು ಹೇಳುವ ಸಂದರ್ಭದಲ್ಲಿ ಕುವೆಂಪುರವರು " ಹೆಗ್ಗಡೆಯವರು ಹಂದಿಯ ಹೇಲುಗೆಸರನ್ನು ಲೆಕ್ಕಿಸದೆ ಮೆಟ್ಟುತ್ತಾ ಇತರ ಅಸ್ಪೃಶ್ಯರಿಂದ ತುಸು ದೂರ ಸರಿದು ನಿಂತರು" ಎಂಬ ಹೇಳಿಕೆಯನ್ನು ನೀಡುತ್ತಾರೆ. ಇದನ್ನು ಹಲವು ದಲಿತಪರ ಕಾಳಜಿಯ ಚಿಂತಕರು ಖಂಡಿಸಿದ್ದಾರೆ. ಇಲ್ಲಿನ ನಿರೂಪಣೆಯ ವಾಸ್ತವ ಏನೆಂದರೆ ಇಲ್ಲಿ ಕುವೆಂಪುರವರು ಅಸ್ಪಶ್ಯರನ್ನು ಅವಮಾನಿಸುತ್ತಿಲ್ಲ. ಅಸ್ಪೃಶ್ಯತೆಯ ಆಚರಣೆ ಬಗ್ಗೆ ನಂಬಿಕೆ ಇರುವ ಹೆಗಡೆಯವರು ಮೇಲಿನ ವಸ್ತುವಿಗಿಂತ ತನ್ನೆದುರಿರುವ ಜನರು ಈ ವಸ್ತುವಿಗಿಂತ ಕಡೆಯಾದವರು ಎಂಬ ನಂಬಿಕಯನ್ನು ಕುವೆಂಪುರವರು ಖಂಡಿಸುತ್ತಾರೆ.

ಇಂತಹ ಅಸ್ಪೃಶ್ಯತೆಯ ಆಚರಣೆಯ ಸಮಸ್ಯೆಯನ್ನು ಹಲವು ದಲಿತ ಕಾದಂಬರಿಗಳು ವಿರೋಧಿಸುತ್ತವೆ. ಅವರ ವಿರೋಧಿ ನೆಲೆಗಳನ್ನು ನೋಡಬಹುದು. ದೇವನೂರ ಮಹಾದೇವರ 'ಒಡಲಾಳ' ಕಾದಂಬರಿಯ ಒಂದು ಸನ್ನಿವೇಶ "ಅಣ್ಣೋ ನೆನ್ನ ತಗಡೂರ್ಗ ವೋಗಿದ್ದಿ. ಅಲ್ಲಿ ನಮ್ಮವರು ಸಿವಬಸಪ್ಪ ಹೋಟೆಲ್ಲ ನುಗ್ಗುದ್ದೂ ಅಂದ್ರ..........ಸಿವಾಸಿವಾ ಅಪಾಟಿ ಜನ.............ನಾವೇನ ಕಾಸ ಕೊಟ್ಟವೂ ಕಲ್ಲ ಕೊಟ್ಟವೂ ಕಾಪಿ ತಿಂಡಿ ಕೊಡ್ರಿ ಅನ್ನೋರು. ಸಿವಬಸಪ್ಪ ಅನ್ನೋವ ಬೆವತೋದ. ಆಮೇಲ ಪೋಲೀಸ್ನವರು ಇಳುದ್ರು, ನಾವು ಕೂಡ್ಸತೀವಿ ಸುಮ್ನಿರಿ ಸುಮ್ನಿರಿ ಅನ್ನೋರು. ಜನ ಅನ್ನೋದು ಪೋಜು ನೋಡೋ ಥರ ನಿಂತಿರೋದು. ತಕ್ಕಳಪ್ಪ ನಾನ್ಯಾಕ ಸುಮ್ನಿರೋದು ಅಂದು ಬುಟ್ಟು ನಾನೂವಿ ಕಾಸ ಬಿಸಾಕಿ 'ದೂಸ ಟೀ ಕೊಡ್ರಿ' ಅಂದೆ ಸಿವಬಸಪ್ಪ ಅನ್ನೋನು ನನ್ನ ದುರುಗುಟ್ಕಂಡು ನೋಡ್ತ ತಂದ್ಕೊಟ್ಟನು".[೧] ಈ ಮೇಲಿನ ವಿವರಣೆಯಲ್ಲಿ ವಿಜಯದ ಉತ್ಸಾಹವಿದೆ. ಇಂತಹದ್ದೆ ಇನ್ನೊಂದು ಪ್ರಸಂಗ ಮುಳ್ಳೂರು ನಾಗರಾಜರವರ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಅಸ್ಪೃಶ್ಯತೆಯ ವಿರುದ್ದದ ಹೋರಾಡುವ ಪ್ರಸಂಗವಿದೆ. ದಲಿತ ಪುಟ್ಟಣ್ಣ ಪರ ಊರಿಗೆ ಹೋಗಿದ್ದಾಗ ಸವರ್ಣೀಯರ ಕೆರೆಯಲ್ಲಿ ನೀರು ಕುಡಿಯುತ್ತಾರೆ. ಇದನ್ನು ಆಕ್ಷೇಪಿಸಿದ ಸವರ್ಣೀಯರೊಡನೆ ವಾದಕ್ಕೆ ಇಳಿದ ಸಂದರ್ಭ ಹೀಗಿದೆ. "ನಿನಗೆಷ್ಟು ಕೊಬ್ಬು ! ಎಂದು ಯಾರೋ ಬೈಯ್ದಾಗ ಪುಟ್ಟಣ್ಣ 'ಕೊಬ್ಬು ಇಲ್ಲಾ ಯಾನು ಇಲ್ಲಳಿ, ಬಾಯಾರುಕವಾಯ್ತು. ನೀರು ಕುಡ್ದೆ. ಕೆರೆ ನಿರುಗ ಕುಲ ಜಾತಿ ಕಟ್ಟು ಇದ್ದದ ಸೋಮ್ಗಳೆ' ಎಂದು ಮರುಪ್ರಶ್ನೆ ಎಸೆಯುತ್ತಾನೆ. 'ನಮ್ಮ ಕೆರೆಲಿ ಹೂಲಾರ್ರು ಮಾದುಗ್ರು ನೀರು ಮುಟ್ಟಬಾರದು ಅಂತ ಕಟ್ಟುಮಡಿವಿ' ಎಂದಾಗ 'ನಿಮ್ಮೂರವರಗ ನೀವು ಮಾಡ್ಕಂಡಿರ ಈ ಕಟ್ಟು ಪರೂರವ ನಾನು ನನಗೆಂಗ ತಿಳೀಬೇಕಳಿ?' ನೀವೇ ಹೇಳಿ ಮತ್ತೇ ? ಎಂದು ಸಾವಾಲು ಹಾಕುತ್ತಾನೆ. ಪುಟ್ಟಣ್ಣನ ಈ ಪ್ರಶ್ನೆಯಿಂದ ಜವರನಾಯ್ಕ ಕಕ್ಕಾ ಬಿಕ್ಕಿಯಾಗುತ್ತಾನೆ. ತನ್ನೆದುರಿಗೆ ಇಂತಹ ಪ್ರಶ್ನೆಯೊಂದು ಬಂದೀತೆಂಬ ಕಲ್ಪನೆಯು ಅವನಿಗಿರಲಿಲ್ಲ. ಉತ್ತರ ಹೊಳೆಯದೆ ಕಂಗಲಾದ ಜವರನಾಯ್ಕನ ಸಹಾಯಕ್ಕೆ ಹೊಟೇಲ್ ಮಾದಪ್ಪ ಬರುತ್ತಾನೆ. ಪುಟ್ಟಣ್ಣನ ಕೆನ್ನೆಗೆ ಬಾರಿಸಿ ಜಾತಿ ಕಟ್ಟು ಮುರಿದ ಕಾರಣ ತಪ್ಪು ಒಪ್ಪಿಕೊಂಡು ತಪ್ಪು ದಂಡ ಮುಂದಿಡಲು ಅಜ್ಞಾಪಿಸುತ್ತಾನೆ. ಆಗ ಪುಟ್ಟಣ್ಣ ತನ್ನ ಅದೇ ತರ್ಕದಿಂದ 'ನಾನ್ಯಕ ತಪ್ಪು ಮಡಗ್ಬೇಕು ಹೇಳಿ ? ಹಾಗಾರ ಈ ಕೆರೆ ಯಾರಟ್ಟಿ ಒಳಗಿದ್ದದು ಹೇಳಿ ? ನಿಮ್ಮಟ್ಟಿವಳುಗ ಈ ಕೆರೆ ಇದ್ರೀಗಪ್ಪ ನೀವು ತಪ್ಪು ಕೇಳಿದು ಸರಿ ನಾ ತಪ್ಪು ಮಡಗದೂ ಸರಿ. ತಗರಿ ಸೋಮ್ಗಾಳೆ ಇದ್ಯಾವ ಸೀಮೆ ನ್ಯಾಯವ ?"[೨] ಎಂದು ಅವರನ್ನ ತಬ್ಬಿಬ್ಬು ಮಾಡುತ್ತಾನೆ. ಮೇಲಿನ ಎರಡು ಘಟನೆಗಳು ದಲಿತ ಕಾದಂಬರಿಗಳಲ್ಲಿ ದಲಿತ ಪಾತ್ರಗಳು ಪ್ರಗತಿಯ ಬಗ್ಗೆ ಪ್ರಜ್ಞಾವಂತ ಸ್ಥಿತಿಯಲ್ಲಿರುವದು ಕಾಣುತ್ತದೆ. ಇವರು ಅಸ್ಪೃಶ್ಯತೆಯನ್ನು ವಿರೋಧಿಸುವ ಪ್ರಜ್ಞೆ ಪಡೆದುಕೊಂಡಿದ್ದಾರೆ. ಅಂಬೇಡ್ಕರ್ ಚಿಂತನೆಯ ಗಾಢ ಪ್ರಭಾವ ಇವರ

ಮೇಲಾಗಿರುವುದನ್ನು ನೋಡುಹುದು ಇವರು ಸವರ್ಣಿಯರ ಎದುರು ನಿಂತು ವಾದಿಸುವಷ್ಟು ಸ್ವಾತಂತ್ರ್ಯವನ್ನು ಪಡೆದಿದ್ದಾರೆ. ಅದರೆ ಕುವೆಂಪುರವರು ಚಿತ್ರಿಸುವ ದಲಿತ ಅಸ್ಪೃಶ್ಯ ಪಾತ್ರಗಳಿಗೆ ಈ ಅವಕಾಶವಿಲ್ಲ. ದಲಿತ ಸಮಾಜದ ಒಂದು ಗುಂಪು ಅಸ್ಪಶ್ಯತೆಯನ್ನು ಒಪ್ಪಿಕೊಂಡಿದ್ದರೆ ಮತ್ತೊಂದು ಗುಂಪು ಇದನ್ನು ವಿರೋಧಿಸುವುದನ್ನು ದಲಿತ ಕಾದಂಬರಿಗಳಲ್ಲಿ ಕಾಣಬುಹುದು. ದಲಿತ ಸಾಹಿತ್ಯ ಪ್ರಾರಂಭವಾಗುವ ಹೊತ್ತಿಗೆ ದಲಿತರು ಸಂಘಟಿತರಾಗಿದ್ದರು. ಈ ಸಂಘಟನೆಗಳ ಮೂಲಕ ಸಮಾಜದ ಅಸ್ಪೃಶ್ಯತೆ, ಜಾತಿ ಆಚರಣೆಯಂಥ ಅನಿಷ್ಟ ಪದ್ಧತಿಗಳನ್ನು ವಿರೋಧಿಸುತ್ತಿದ್ದರು. ಇವರ ಈ ವಿರೋಧಕ್ಕೆ ಕಾನೂನಿನ ಬೆಂಬಲವಿತ್ತು. ಇದನ್ನು ಒಡಲಾಳದ ಗುರುಸಿದ್ದನ ಹೋಟೆಲ್ ಪ್ರವೇಶದ ಪ್ರಸಂಗ ಸ್ಪಷ್ಟಪಡಿಸುತ್ತದೆ. ಇದರಂತೆ ದಲಿತ ಕಾದಂಬರಿಯಲ್ಲಿನ ಕೆಲವು ದಲಿತ ಪಾತ್ರಗಳು ವಿದ್ಯಾವಂತ ನೆಲೆಯಿಂದ ಬಂದವರಾಗಿದ್ದರು. ಹಾಗಾಗಿ ಇವರಿಗೆ ಸಮಾಜದಲ್ಲಿನ ಅಸಮಾನತೆಯ ವಿರುದ್ಧ ಹೋರಾಟ ನಡೆಸುವ ಪ್ರಜ್ಞೆ ಇತ್ತು.

ಕುವೆಂಪು ಕಾದಂಬರಿಗಳಲ್ಲಿನ ದಲಿತ ಪಾತ್ರಗಳಿಗೆ ತಮ್ಮ ಮೇಲಾಗುವ ಕ್ರೌರ್ಯದ ಕಲ್ಪನೆ ಇರಲಿಲ್ಲ. ಕುವೆಂಪುರವರು ಕ್ರಾಂತಿಯ ಮೂಲಕ ಸಮಾಜದಲ್ಲಿನ ಅಸಮಾನತೆಯನ್ನು ಸರಿಪಡಿಸುವ ಮನೋಭಾವದವರಾಗಿರಲ್ಲಿಲ್ಲ. ಧಾರ್ಮಿಕ, ಸಾಮಾಜಿಕ, ಆರ್ಥಿಕ ಶೋಷಣೆಗಳನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಸುಧಾರಣಾವಾದಿ ಪಾತ್ರಗಳ ಮೂಲಕ ಹೋಗಲಾಡಿಸುವ ಪ್ರಯತ್ನ ಮಾಡಿದರು. ಕಾನೂರು ಹೆಗ್ಗಡಿತಿಯ ಹೂವಯ್ಯನ ಪಾತ್ರ ಈ ಹಿನ್ನಲೆಯ ಆಶಯವನ್ನು ಹೊಂದಿದೆ. ಕುವೆಂಪುರವರು ಹೂವಯ್ಯನ ಪಾತ್ರದ ಮೂಲಕ ದಲಿತ ಪರವಾದ ಚಿಂತನೆಗೆ, ಅವರ ಸಮಾನತೆಗೆ ಪ್ರಯತ್ನಿಸಿದರು. ಈ ಪರಿವರ್ತನೆ ಯಾವ ರೀತಿ ದಲಿತ ಸಮಾಜದ ಮೇಲೆ ತನ್ನ ಪ್ರಭಾವವನ್ನು ಬಿರಿತ್ತು ಎಂಬುದಕ್ಕೆ ಕಾನೂರು ಹೆಗ್ಗಡತಿ ಕಾದಂಬರಿಯ ಒಂದು ಉದಾರಣೆಯನ್ನು ನೋಡಬಹುದು. ಅಂಕವಾಡಲು ಹೂವಯ್ಯನ ದುಡ್ಡು ಬಳಸುವ ಮುನ್ನ ಬಾಡುಗಳ್ಳ ಸೋಮನಿಗೆ ಹೂವಯ್ಯನ ಬಗ್ಗೆ ಹೀಗನ್ನಿಸುತ್ತದೆ.

" ತನ್ನನ್ನು ಕಾಡುತನದಿಂದ ಈ ನಾಗರಿಕ ಸ್ಥಿತಿಗೆ ತಂದು ಪೊರೆದ ಸ್ವಾಮಿಗೆ ಯಾರಿಗೂ ಕೇಡೆಣಿಸದೆ ಎಲ್ಲರನ್ನೂ ಉದ್ಧಾರ ಮಾಡಬೇಕೆಂದು ಪ್ರಯತ್ನಿಸುತ್ತಿರುವ ಸ್ವಾಮಿಗೆ ಕೀಳು ಜಾತಿಯ, ಬಡಬಗ್ಗರ ಮುರುಕಲು, ಹುರುಕಲು ಗುಡಿಸಲುಗಳಿಗೆ ಔಷಧಿ ಪಥ್ಯಗಳನ್ನು ಕೊಂಡೊಯ್ದು ನೀಡಿ ಕಾಪಾಡಿ ದೇವರಂತಿರುವ ಸ್ವಾಮಿಗೆ, ದ್ರೋಹವೆಸಗಿದಂತಾಗುವುದಿಲ್ಲವೆ ?" (ಕುವೆಂಪು:೨೦೦೪:೪೮೦)ಎಂಬ ಅಪರಾಧಿ ಪ್ರಜ್ಞೆ ಸೋಮನಲ್ಲಿ ಕಾಡುತ್ತದೆ. ಆದರೆ ಇಂತಹ ಒಂದು ಒಳ್ಳೆಯ ಅಭಿಪ್ರಾಯ ಸವರ್ಣೀಯವರ ಮೇಲೆ ಹೊಂದಿರುವುದನ್ನು ನಾವು ದಲಿತ ಕಾದಂಬರಿಗಳಲ್ಲಿ ಕಾಣಲು ಸಾಧ್ಯವಿಲ್ಲ. ಕುವೆಂಪುರವರು ಮಾನವೀಯ ಅಂತಃಕರಣದಿಂದ ದಲಿತ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಅಂದಿನ ಸಂದರ್ಭಕ್ಕೆ ಹೊಂದಿಕೊಳ್ಳುವ ಅಸ್ಪೃಶ್ಯತೆಯ ಚಿತ್ರಣಗಳನ್ನು ನೈಜವಾಗಿ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಕುವೆಂಪು ಕಾದಂಬರಿಗಳು ಮಲೆನಾಡಿನ ಜಾತಿಪದ್ಧತಿಯ ಕರಾಳ ಮುಖಗಳನ್ನು ಚಿತ್ರಿಸುತ್ತವೆ. ಮಲೆನಾಡಿನ ಹೆಗ್ಗಡೆ–ಗೌಡರಿಗೆಲ್ಲಾ ಹಳೆ ಪೈಕದವರು ಅಸ್ಪೃಶ್ಯರಾದರೆ, ಹಳೆ ಪೈಕದವರಿಗೆ ಹೊಲೆಯರು, ಮಾದಿಗರು, ಹಸಲರು, ಬೇಲರುಗಳು ಅಸ್ಪೃಶ್ಯರು. ಹೊಲೆಯರು ಮತ್ತು ಇತರ ಕೆಳಜಾತಿಯವರನ್ನು ಘಟ್ಟದ ಕೆಳಗಿನವರು ಇವರನ್ನು ಅಸ್ಪೃಶ್ಯರಂತೆ ಕಾಣುವ ಹಲವಾರು ಸಂದರ್ಭಗಳು ಕುವೆಂಪು ಕಾದಂಬರಿಯಲ್ಲಿ ದಾಖಲಾಗಿವೆ.

ಲಕ್ಕುಂದದ ಜಮೀನಿನಲ್ಲಿ ಮುಕ್ಕಾಲು ಪಾಲು ಸಿಂಬಾವಿ ಭರಮೈ ಹೆಗ್ಗಡೆಯವರಿಗೆ ಸೇರಿತ್ತು. ಉಳಿದ ಸ್ವಲ್ಪ ಭೂಮಿ ಹಳೆ ಪೈಕದ ಸೇಸನಾಯ್ಕನದಾಗಿತ್ತು. ಹಳೆ ಪೈಕದವರ ಸಾಂಪ್ರದಾಯಿಕ ಕೆಲಸವೆಂದರೆ ಒಕ್ಕಲಿಗ ಒಡೆಯರ

ಒಕ್ಕಲುಗಳಾಗಿದ್ದುಕೊಂಡು ಬಗನಿಯ ಮರದಿಂದ ಕಳ್ಳು ಇಳಿಸಿ, ಕುಡಿದು ಮಾರಿ ಜೀವನ ನಡೆಸಬೇಕಾಗಿತ್ತು. ಇವರಿಗೆ ದೀವರು ಎಂಬ ಮತ್ತೊಂದು ಹೆಸರಿತ್ತು. ಇವರು ವ್ಯವಸಾಯ ಮಾಡುವುದು ಮಹಾ ಅನಾಚಾರವೆಂದು ಅನೇಕ ಒಕ್ಕಲಿಗರು ಭಾವಿಸಿದ್ದರು. ಶೂದ್ರರರು ಹೇಗೆ ವೇದ ಕಳಿಯುವುದು ನಿಷಿದ್ದವೋ ಹಾಗೇ ಇವರಿಗೆ ಭೂಮಿ ನಿಷಿದ್ದವಾಗಿತ್ತು. ಇದನ್ನು ಒಕ್ಕಲಿಗರಾಗಿದ್ದ ನಾಯಕರು ಹೆಗ್ಗಡೆಗೌಡರು ತೀರ್ಮಾನ ಮಾಡಿದ್ದರು ಅಷ್ಟೇ ಅಲ್ಲದೇ ಇವರು ಮದುವೆ ಮುಂತಾದ ಶುಭ ಕಾರ್ಯಗಳಲ್ಲಿ ಒಕ್ಕಲಿಗರನ್ನು ಅನುಸರಿಸುವಂತಿರಲ್ಲಿಲ್ಲ. ಇದರಲ್ಲಿ ಮುಖ್ಯವಾದದು " ಮದುವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡಬಾರದು ; ದಂಡಿಗೆಯ ಮೇಲೆ ಕುತರಂತೂ ಮಧು ಮಕ್ಕಳಿಗೂ, ದಿಬ್ಬಣದವರಿಗೂ ಉಳಿಗತಿಯಿರಲಿಲ್ಲ". (ಕುವೆಂಪು : ೧೯೬೨ : ೧೨)

ಇವೇ ಮೊದಲಾದ ಜಾತಿ ಪದ್ಧತಿಯನ್ನು ಹಳೆ ಪೈಕದವರ ವಿರುದ್ಧ ಮಲೆನಾಡಿನ ಒಕ್ಕಲಿಗರು ನಡೆಸುತ್ತಿದ್ದರು. ಕೆಳಗಿನ ಸ್ತರದಲ್ಲಿ ಈ ಆಚರಣೆ ಮತ್ತೊಂದು ರೀತಿಯಲ್ಲಿ ರೂಢಿಯಲ್ಲಿತ್ತು. ಘಟ್ಟದ ಕೆಳಗಿನ ಅಸ್ಪೃಶ್ಯರಿಗೆ ಘಟ್ಟದ ಮೇಲಿನ ದಲಿತರು ಕೆಳ ಜಾತಿಯವರಾಗಿದ್ದರು. ಇದನ್ನು ಕುವೆಂಪುರವರು ತಮ್ಮ ಕಾದಂಬರಿಗಳ ಮೂಲಕ ಸೂಚಿಸುತ್ತಾರೆ. ಗುತ್ತಿಯು ಹಳೆ ಪೈಕದ ಸೇಸನಾಯ್ಕನ ಮನೆಗೆ ಹೋದಾಗ ಸೇಸನಾಯ್ಕನು ಗುತ್ತಿಗೆ ತನ್ನ ಮನೆಯ ಹಿಂಭಾಗದ ಕೊಟ್ಟಿಗೆಯಲ್ಲಿ ಊಟಕ್ಕೆ ಬಡಿಸುವುದನ್ನು ನೋಡಬಹುದು. ಅದೇ ರೀತಿ ಗುತ್ತಿ ಒಮ್ಮೆ ಐತನ ಮನೆಯಲ್ಲಿ ಅನಿರ್ವಾಯವಾಗಿ ಉಳಿಯಬೇಕಾದ ಪರಿಸ್ಥಿತಿ ಬರುತ್ತದೆ. ಆಗಿನ ಸಂದರ್ಭದ ಘಟ್ಟದ ಕೆಳಗಿನ ಅಸ್ಪೃಶ್ಯರು ಘಟ್ಟದ ಮೇಲಿನ ಅಸ್ಪೃಶ್ಯರ ಬಗ್ಗೆ ಹೊಂದಿರುವ ಭಾವನೆಯನ್ನು ಈ ಕೆಳಗಿನ ವಿವರಣೆ ತಿಳಿಸುತ್ತದೆ. ಪಿಂಚಲು ತನ್ನ ಗಂಡನನ್ನು ಕುರಿತು " ಇವತ್ತೊಂದು ದಿವಸ ಗುತ್ತಿಯ ಸಮೀಪದಲ್ಲಿ ದೂರ ಮಲಗಿದರಾಯ್ತು ಎನ್ನುತ್ತಾಳೆ. ಅದಕ್ಕೆ ಐತ ಥೂ.....ಥೂ.....ಥೂ ನಾನು ಒಲ್ಲೆ, ಹೊಲೆಯನ ಬಳಿ ಮಲಗುವುದೇ" (ಕುವೆಂಪು ; ೧೯೬೨ : ೫೨೬) ಎಂದು ಅಸಹ್ಯ ಪಡುತ್ತಾನೆ. ಇದೇ ತರಹದ ಮತ್ತೊಂದು ಸಂದರ್ಭದಲ್ಲಿ ತಿಮ್ಮಿ ಐತನ ಮನೆಗೆ ಕಳ್ಳರಿಂದ ರಕ್ಷಣೆ ಪಡೆಯಲು ಬರುತ್ತಾನೆ. ಪಿಂಚಲು ತನ್ನ ಗಂಡನಿಗಾಗಿ ಕಾಯುತ್ತಿದ್ದ ಸಂದರ್ಭದಲ್ಲಿ ಬೆಟ್ಟಳ್ಳಿ ತಿಮ್ಮಿ ಪಿಂಚಲುವಿಗೆ ಹೀಗೆ ಕೇಳಿಕೊಳ್ಳುತ್ತಾಳೆ. "ಪಿಂಚಲವ್ವಾ ನಾನು ಬೆಟ್ಟಳ್ಳಿ ತಿಮ್ಮಿ! ಪಿಂಚಲು ಬಾಗಿಲು ತೆರೆದು ತಲೆಯಿಂದ ಕಾಲಿನವರೆಗೂ ಒದ್ದೆಯಾಗಿ ಸೀರೆಯಿಂದ ನೀರುಸೋರುತ್ತಿದ್ದ ಹೊಲೆಯರ ಹುಡುಗಿಯನ್ನು ಒಳಕ್ಕೆ ಬಿಟ್ಟು, ಮತ್ತೆ ಬಾಗಿಲು ಮಚ್ಚಿ ಹಗ್ಗ ಬಿಗಿದಳು. ಬೇರೆಯ ಸನ್ನಿವೇಶ ಅಥವಾ ಸಮಯವಾಗಿದ್ದರೆ. ಎಷ್ಟೊಂದು ಮೀನ ಮೇಷ ನಡೆಯುತ್ತಿತ್ತೋ ಮನಸ್ಸಿನಲ್ಲಿ ?. ಅದರೆ ಹೊಲೆಯರವಳನ್ನು ಒಳಗೆ ಸೇರಿಸಬಹುದೆ ಬೇಡವೆ ? ಎಂಬ ಪ್ರಶ್ನೆಗೆ ಅವಳ ಪ್ರಜ್ಞೆಯಲ್ಲಿ ಅವಕಾಶವೇ ಇರಲಿಲ್ಲ." ೩ ಈ ಸಂದರ್ಭದಲ್ಲಿ ಕುವೆಂಪುರವರು ಜಾತಿ ಪದ್ದತಿಗಿಂತಲೂ ಮಿಗಿಲಾದ ತಮ್ಮ ಮಾನವೀಯ ನೆಲೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ಎಲ್ಲ ಸಂದರ್ಭಗಳಲ್ಲೂ ಕಾದಂಬರಿಗಳಲ್ಲಿನ ಪಾತ್ರಗಳು ಜಾತಿ ಪದ್ದತಿಯ ಆಚರಣೆಗೆ ಮಹತ್ವವನ್ನು ನೀಡುವುದಿಲ್ಲ ಎಂಬುದನ್ನು ನಾವು ಗಮನಿಸಬೇಕು ಪೋಲಿಸರಿಂದ ತಪ್ಪಿಸಿಕೊಂಡು ಕಾಡು-ಮೇಡುಗಳನ್ನು ಅಲೆಯುವ ಗುತ್ತಿಗೆ ಒಮ್ಮೆ ಹೀಗನ್ನಿಸುತ್ತದೆ. " ಇದ್ದಕಿದ್ದ ಹಾಗೇ ಏನೋ ಮಿಂಚು ಹೊಳೆದಂತಾಯ್ತು ಗುತ್ತಿಗೆ ' ನಾನು ಹೊಲೇರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ, ಹಿಂಗಾಗ್ತಿತ್ತೆ ?' ಎಂದು ಕೊಂಡನು. ' ಗೌಡರ ಜಾತಿಗೆ ? ಸೆಟ್ಟರ ಜಾತಿಗೆ ? ಬಿರಾಂಬರ ಜಾತಿಗೆ ?......... ಉಂಹೂ ಈ ಜಲ್ಮದಾಗೆ ಅದೆಲ್ಲಿ ಸಾಧ್ಯ ?........ ಸಾಬರ ಜಾತಿಗೆ ? ಕಿಲಸ್ತರ ಜಾತಿಗೆ ?..... ಥೂ....ಥೂ....ಥೂ ತನ್ನ ತಲೆಯಲ್ಲಿ ಸುಳಿದಿದ್ದ ಏನನ್ನೂ ಉಗುಳಿ ನಿರಾಕರಿಸಿದನು."೪ ಇಲ್ಲಿ ಕಿಲಸ್ತರು ಹಾಗೂ ಸಾಬರ ಜಾತಿಗಳಿಗಿಂತ ತನ್ನ ಜಾತಿಯೇ ಶ್ರೇಷ್ಠ ಎಂಬ ಮನೋಭಾವವನ್ನು ಗುತ್ತಿ ಹೊಂದಿದ್ದಾನೆ. ಈ ಘಟನೆಗೆ ಪೂರಕವಾದ ಮತ್ತೇರಡು ಅಂಶಗಳನ್ನು ಗಮನಿಸಬಹುವುದು. ಕರ್ನಾಟಕದಲ್ಲಿ ಮೇಲ್ಜಾತಿಯವರು ಕೆಳ ಜಾತಿಯವರ ಹಟ್ಟಿಗೆ ಬಂದರೆ ಸೆಗಣಿಯಲ್ಲಿ

ಹೊಡೆಯುವ ಆಚರಣೆ ಇದ್ದುದನ್ನು **ದಾಟು** ಕಾದಂಬರಿ ತಿಳಿಸುತ್ತದೆ. ದಾಟು ಕಾದಂಬರಿಯ ವೆಂಕಟರಾಮಯ್ಯನವರ ಪ್ರಸಂಗದಲ್ಲಿ ಈ ಘಟನೆ ಉಲ್ಲೇಖವಾಗಿದೆ. ಇಂತಹದೇ ಘಟನೆಗಳು ಕುವೆಂಪು ಕಾದಂಬರಿಗಳಲ್ಲೂ ಸಹ ದಾಖಲಾಗಿವೆ. ಇದರ ಅರ್ಥ ತಮ್ಮ ಜಾತಿಯೇ ಶ್ರೇಷ್ಠವೆಂದು ನಂಬುವ ದಲಿತರು ಅಂದಿನ ಸಂದರ್ಭದಲ್ಲಿ ಇದ್ದರೂ ಎಂಬುದನ್ನು ಕೆಳಗಿನ ಉಲ್ಲೇಖಗಳಿಂದ ತಿಳಿದುಕೊಳ್ಳಬಹುದು. ತಿಮ್ಮಪ್ಪ ಹೆಗಡೆ ಕೆಲಸಕ್ಕೆ ಆಳುಗಳನ್ನು ಕರೆಯಲು 'ಒಡೆರ ದಿಣ್ಣೆ' ಹತ್ತಿರ ಬಂದು ಕೂಗುತ್ತಿದ್ದ ಸಂದರ್ಭದಲ್ಲಿ ಹೊಲೆಯರ ಸಣ್ಣ ತನ್ನ ಮಗಳಿಗೆ ಈ ರೀತಿ ಎಚ್ಚರಿಸುತ್ತಾನೆ. " ಏ ಪುಟ್ಟೀ ಸಣ್ಣ ಹೆಗ್ಗಡೇರ ಸವಾರಿ ಬಂದ ಹಾಂಗೆ ಕಾಣ್ತದೆ, ಕೆಲಸಕ್ಕೆ ಕರೆಯೋಕೆ. ಎಲ್ಲರೂ ಬಿಡಾರದ ಒಳಗೆ ಇದಾರೆ. ಒಬ್ಬರೂ ಹೊರಗೆ ತಲೆ ಹಾಕಿದ್ಹಾಂಗೆ ಕಾಣಲಿಲ್ಲ. ಇನ್ನೂ ಅವರೇ ಕೇರಿ ಒಳಗೆ ನುಗ್ಗಿದ್ರೆ, ಇಡೀ ಕೇರಿಗೆ ಅಪಶಕುನ ! ನಮ್ಮ ದೆಯ್ಯದ್ಯಾವರಿಗೆ ಮುಟ್ಟು ಚಿಟ್ಟಾದ್ರೆ ಕೇರಿಗೆ ಕೇರೀನೇ ತೆಗೆದು ಬಿಡ್ತವೆ ಹೋಗಿ ಅ ಬೈರಗಾದ್ರೂ ಹೇಳೆ." (ಕುವೆಂಪು : ೧೯೬೭ : ೧೦೧) ಎಂದು ಪುಟ್ಟಿಗೆ ಎಚ್ಚರಿಸುತ್ತಾನೆ. ಮುಂದಿನ ಉಲ್ಲೇಖದಲ್ಲಿಯೂ ಇದಕ್ಕೆ ಪೂರಕವಾದ ಅಂಶವನ್ನು ಗಮನಿಸಬಹುದು. ಸಣ್ಣಬೀರನಿಗೆ 'ಹೊನ್ನಳ್ಳಿ ಹೊಡ್ತಾ' ನೀಡಲು ಬಂದಿದ್ದ ಇಜಾರದಸಾಬಿ ಲುಂಗಿ ಸಾಬಿಯ ಕಡೆ ತಿರುಗಿ ತುರುಕು ಮಾತಿನಲ್ಲಿ "ಇವನಿಗೆ ಏನಂತೀಯಾ ಸೊಕ್ಕು ಕೇರೆಗೆ ಯಜಮಾನ ಅಂತಾ ಬಹಳ ಧೀಮಾಕು. ಅವೋತ್ತು ನಾನು ಅಜೀಜು ಚಮಡಕ್ಕಾಗಿ ಕುದುರೆ ತಟ್ಟು ತೆಗೆದುಕೊಂಡು ಇವರ ಕೇರಿಗೆ ಹೋದರೆ 'ನೀವೂ ಕೇರಿ ಒಳಗೆಲ್ಲಾ ಬರಬಾರದು. ನಮಗೂ ದೇವರು ದಿಂಡಿರೂ ಇದಾವೆ. ನಮ್ಮ ಜಾತಿ ಕೆಟ್ಟು ಹೋಗ್ತದೆ' ಅಂತಾ ಏನೇನೊ ಬೊಗಳಿಬಿಟ್ಟ" (ಕುವೆಂಪು : ೧೯೬೭ : ೩೪೫) ಎಂದು ತನಾಗದ ಅವಮಾನವನ್ನು ಇಜಾರದ ಸಾಬಿ ವ್ಯಕ್ತಪಡಿಸಿದ್ದಾನೆ. ಮೇಲಿನ ವಿವರಣೆಗಳಲ್ಲಿ ಕುವೆಂಪುರವರು ಜಾತೀಯತೆಯ ಎರಡು ಮುಖಗಳನ್ನು ತೋರಿಸುತ್ತಾರೆ. ಒಂದು ಮೇಲ್ವರ್ಗದ ಜನರು ತಮ್ಮ ಕೆಳ ಸಮುದಾಯಗಳನ್ನು ಜಾತೀಯತೆಯ ಬಂಧನದೊಳಗೆ ಬಂಧಿಸಿದ್ದಾರೆ. ಕೆಳವರ್ಗದಲ್ಲಿನ ವಿಭಿನ್ನ ಸಮುದಾಯಗಳು ತಮ್ಮದೇ ಆದ ನಂಬಿಕೆಗಳನ್ನು ಇಟ್ಟಿಕೊಂಡು ತಮ್ಮ ತಮ್ಮಲ್ಲೇ ಜಾತಿ ಪದ್ದತಿಯ ವಿವಿಧ ಆಚರಣೆಗಳನ್ನು ಆಚರಿಸುವುದನ್ನು ಕೆಲವು ಕಟ್ಟುಪಾಡುಗಳನ್ನು ಪಾಲಿಸುವುದನ್ನು ನೋಡಬಹುದು.

ಜಾತೀಯತೆಯ ಆಚರಣೆಗಳ ವಿರುದ್ಧ ದಲಿತ ಕಾದಂಬರಿಗಳಲ್ಲಿ ಪ್ರತಿರೋಧವನ್ನು ಒಡ್ಡುವ ಪ್ರವೃತ್ತಿಯನ್ನು ಕಾಣಬಹುದು. ಮುಳ್ಳೂರು ನಾಗರಾಜರವರ **ಮರಣ ಮಂಡಲ ಮಧ್ಯದೊಳಗೆ** ಕಾದಂಬರಿಯ ಬಸವರಾಜುವಿನ ಪಾತ್ರ ಈ ಹಿನ್ನಲೆಯ ಅಂಶಗಳನ್ನು ಒಳಗೊಂಡಿದೆ. ಹಾಗೆಯೇ ದೇವನೂರ ಮಹಾದೇವ ಅವರ **ಒಡಲಾಳ** ಕಾದಂಬರಿಯಲ್ಲಿಯು ಜಾತೀಯತೆಯ ವಿರುದ್ದ ಸಂಘರ್ಷವನ್ನು ನೋಡಬಹುದು. ಈ ಎರಡು ಕಾದಂಬರಿಗಳು ದಲಿತ ಪಾತ್ರ ಚಿತ್ರಣದಲ್ಲಿ ಎಚ್ಚರವಹಿಸಿರುವುದನ್ನು ಕಾಣಬಹುದು.

ಮುಳ್ಳೂರು ನಾಗರಾಜುರವರ ಮರಣ ಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿನ ಬಸವರಾಜುವಿನ ಪಾತ್ರವು ಜಾತೀಯತೆಯ ವಿರುದ್ದ ಸಂಘರ್ಷಕ್ಕೆ ಇಳಿಯುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಈ ಪ್ರವೃತ್ತಿಯನ್ನು ನಿಯಂತ್ರಿಸುವುದು ಸವರ್ಣೀಯರಿಗೆ ಸವಾಲಿನ ಕೆಲಸವಾಗುತ್ತದೆ. ದಲಿತ ಹೆಣ್ಣಿನ ಮೇಲೆ ಕೈ ಇಟ್ಟ ಎಂಬ ಕಾರಣಕ್ಕಾಗಿ ಪಟೇಲರ ಮಗನ ಎದುರಿನಲ್ಲಿ ಅವನ ಹೆಂಡತಿಯ ಮೇಲೆ ಅತ್ಯಾಚಾರ ಮಾಡಲು ಬಸವರಾಜು ಅಳುಕುವುದಿಲ್ಲ. ಇದರಿಂದ ರೋಸಿಹೋದ ಸವರ್ಣೀಯರಿಗೆ ಇವನು ನುಂಗಲಾರದ ತುತ್ತಾಗುತ್ತಾನೆ. ಸವರ್ಣೀಯರ ಹೋಟೆಲ್‌ಗೆ ಅಕ್ರಮವಾಗಿ ಪ್ರವೇಶಿಸುವ ಆತನ ಬಗ್ಗೆ ಊರಿನ ಮೇಲ್ಜಾತಿಯವರ ಅಭಿಪ್ರಾಯ ಹೀಗಿದೆ "... ಅವ ಓಟ್ಲುಗ ಬಂದ . ಒಳಕೇ ಬಂದ ನಾವೇನಾರೂ ಬ್ಯಾಡಾ ಅಂದ್ವಾ ?..... ನಿನ್ದುಡ್ನು ನಿನ್ಕಾಸು ನಿನ್ನಿಷ್ಟ ಮಜಾ ಮಾಡು ಅಂದೋ. ಅದು ಆಯ್ತು. ಆಮೇಲೆ ನಾವು

ಕುಡಿಯೊಗಳಾಸನಲ್ಲಿಯೂ ಕುಡುದ. ನಮ್ಮೆದುರುಗಿಯ ಕಾಲ ಮೇಲೆ ಕಾಲಾಕಂದು ಕೂತ್ಕಂಡು ದವಲತ್ತು ಮಾಡ್ಕಂಡು ಕುಡುದ . ನಾವು ದುಸ್ರಾ ಮತಾಡಿದ್ರ ಕೇಳು.:" (ಮುಳ್ಳೂರು ನಾಗರಾಜ : ೧೯೮೬ : ೫೨)

ಈ ಸಂದರ್ಭದ ಸವರ್ಣೀಯರ ಹೇಳಿಕೆಯಲ್ಲಿ ದಲಿತರ ಸಾಮಾಜಿಕ ಬದಲಾವಣೆಯ ಬಗ್ಗೆ ಕೆಲವು ಸವರ್ಣೀಯರಿಗೆ ಅಸಮದಾನ ಇರುವುದನ್ನು ಮೇಲಿನ ಹೇಳಿಕೆ ತಿಳಿಸುತ್ತದೆ. ಒಂದು ರೀತಿಯಲ್ಲಿ ಈ ಘಟನೆ ದಲಿತರ ಪ್ರಜ್ಞೆಯನ್ನು ಮೂಡಿಸುವ ಕಾರ್ಯದಲ್ಲಿ ಸಫಲವಾಗಿದೆ. ಇದೇ ರೀತಿ ಕುಸುಮ ಬಾಲೆಯ ಅಮಾಸನು ಸೈಕಲ್‌ನಲ್ಲಿ ಬರುತ್ತಿದ್ದಾಗ ಅವನನ್ನು ನೋಡಿದ ಕೆಲವು ಸವರ್ಣೀಯರ ಅಸಮದಾನ ಈ ಕೆಳಗಿನಂತೆ ನಿರೂಪಿತವಾಗಿದೆ. " ನೋಡ್ರುಡಾ ನೋಡ್ರುಡಾ ! ಹೊಟ್ಟುಗ ಹಿಟ್ಟು ಇಲ್ದೆ ಇದ್ರೂ ಆ ಹೊಲೀನ್ ಕೊಬ್ಬ ! ನಾವ್ ನೋಡ್ಲಿ ಅಂತ್ಲಿಯ ಹಾವ್ನ ಥರ್‍ವಾಗಿ ನಲೀತಾ ಬತ್ತಾ ಅವ್ನಲ್ಲಾ ! ಬಡ್ಡೇದ್ನಗ. ಈ ಹ್ಯಾಂಡಲ್ನೆ ಹಿಡ್ಕಳಕ ಆಗಬಾರ್‍ದು...... ಆ ಥರ್‍ವಾಗಿ ಅವ್ನ ಆ ಏಡು ಮುಂಗೈನೀಗ ಕತ್ತರ್‍ಸಿ ಅತ್ತಾಗೊಂದು ಇತ್ತಾಗೊಂದು ಎಸ್ದು ಬುಟ್ರೆಗಪ್ಪಾ. ಅಂತ ಬಾಯೊಳಗಲ ಹಲ್ಗಳ ನೊರಗುಟ್ಸಿದನು" (ದೇವನೂರ ಮಹಾದೇವ : ೧೯೮೮ : ೩೮) ಮೇಲಿನ ಎರಡು ಪ್ರಕರಣಗಳಲ್ಲಿ ದಲಿತರ ಉದ್ಧಾರವನ್ನು ಸಹಿಸದ ಸವರ್ಣೀಯರ ಅಸಮದಾನವನ್ನು ಗುರುತಿಸಬಹುದು. ಹೀಗೆ ಅಸಮಾಧಾನಗೊಂಡ ಸವರ್ಣೀಯರು ತಮ್ಮ ಮನೋವೇಧನೆಯನ್ನು ದಲಿತರ ಯಜಮಾನರಲ್ಲಿ ತೊಡಿಕೊಳ್ಳುತ್ತಾರೆ. ದಲಿತರ ಯಜಮಾನರನ್ನು ಕರೆದು ದಲಿತ ಯುವಕರ ಬಂಡಾಯ ಮನಸ್ಥಿತಿಗಳನ್ನು ಒಪ್ಪಿಸುವಂತಹ ಕೆಲಸವನ್ನು ಮಾಡುತ್ತಾರೆ. ದಲಿತ ಕೇರಿಯ ಯಜಮಾನರುಗಳು ತಲತಲಾಂತರದಿಂದ ಸವರ್ಣೀಯರ ಅಪ್ಪಣೆಯ ಮೇರೆಗೆ ಜೀವನ ಪದ್ದತಿಯನ್ನು ರೂಢಿಸಿಕೊಂಡವರು. ಸವರ್ಣೀಯರ ಆದೇಶಗಳನ್ನು ಪಾಲಿಸುವವರಲ್ಲಿ ಇವರು ಪ್ರಮುಖರು ಈ ಕಾರಣಕ್ಕಾಗಿ ಇವರು ಸವರ್ಣೀಯರ ಕ್ರೌರ್ಯವನ್ನು ವಿರೋಧಿಸದೇ ಒಪ್ಪಿಕೊಳ್ಳುವ ಮನೋಭಾವದವರಾದುದರಿಂದ ಸವರ್ಣೀಯರು ಇಂತಹ ದಲಿತ ಮುಖಂಡರಲ್ಲಿ ತಮ್ಮ ಅಸಮದಾನವನ್ನು ತೊಡಿಕೊಳ್ಳುತ್ತಾರೆ. " ಯಾನುಡ ನಂಜ ಈ ಕಲಿಗಾಲದ ಬಡ್ಡೆತ್ತವು ಜಾತಿ ನೀತಿ ಒಂದೂ ಬ್ಯಾಡ ಅಂತವಲ್ಲ ಇದ್ದರಿನಾ ? ಎನಲು ನಂಜ 'ಈಗೇನಳಿ ಅವ್ರು ಬ್ಯಾಡ ಅಂದ್ಬುಟ್ರ ಜಾತಿ ವಂಟೊದ್ದಳಿ?..ದೇವ್ರು ಮಾಡುದ ಜಾತಿ. ದೇಸದ ಮೇಲೆ ವಂಟೊದ್ದಳಿ ಅಯ್ಯೋಸಿವ್ನೇ ! ಯಾವ್ದು ಎಲ್ಲ ಹೋಗಲ್ಲ ಕನ ಸುಮ್ನಿರಿ ನಮ್ಮಪ್ಪ ನಿಂಪಾದ' ಎಂದಾಗ ಸವರ್ಣೀಯರು ಸಂತೃಪ್ತರಾಗುತ್ತಾರೆ. ಹಾಗೂ ಮುಂದುವರೆದು' ಎಕ್ಡದ ಜಾಗ ಎಕ್ಡಕ ಟೋಪಿಯ ಜಾಗ ಟೋಪಿಗ, ಅದ ಬುಟ್ಬುಟ್ಟು ಎಕ್ಡವ ತಗ್ದು ತಲ ಮೇಲ ಮಡಿಕಂಡ್ ಟೋಪಿವಳಕ ಕಾಲು ಸಿಕ್ಸುದ್ರ ನ್ಯಾಯವು ಸರಿ ಬಂದದಾ ನಂಜ' ಎಂದು ಪ್ರಶ್ನಿಸುತ್ತಾರೆ."೫ ದಲಿತ ಯುವಕರ ಪುಂಡತನವನ್ನು ದಲಿತ ಹಿರಿಯರು ನಿಯಂತ್ರಿಸಲಿ ಎಂಬುದು ಸವರ್ಣೀಯರ ಅಭಿಪ್ರಾಯ ಈ ಕಾರಣಕ್ಕಾಗಿ ದಲಿತ ಕೇರಿಯ ಯಜಮಾನ ನಂಜನಿಗೆ ಬಸವರಾಜುವಿನ ಕುಕೃತ್ಯಗಳ ಬಗ್ಗೆ ವಿವರಿಸುತ್ತಾರೆ.

ಮೇಲಿನ ಹೇಳಿಕೆಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಅಲ್ಲಿನ ದಲಿತ ಪಾತ್ರಗಳ ಸೇಡಿನ ಮನೋಭಾವಗಳು ದಲಿತರು ಸವರ್ಣೀಯರ ಜೊತೆ ಸರಿಸಮಾನವಾಗಿ ಬಾಳಬೇಕೆಂಬ ಆಶಯವನ್ನು ಕೆಲವು ದಲಿತ ಪಾತ್ರಗಳು ಒಳಗೊಂಡಿರುವುದನ್ನು ನೋಡಬಹುದು. ದಲಿತರು ಸಮಾನತೆಯನ್ನು ಬಯಸುವುದು. ಸವರ್ಣೀಯರಿಗೆ ಸಮಸ್ಯೆಯಾಗಿ ಪರಿಣಮಿಸಿದೆ. ಅದೇ ರೀತಿ ಸವರ್ಣೀಯರ ಜಾತಿ ಪದ್ದತಿಯನ್ನು ಕುರಿತಾದ ಕಟ್ಟುಕಟ್ಟಲೆಗಳನ್ನು ಮುರಿಯುವ ನಿಟ್ಟಿನಲ್ಲಿ ದಲಿತ ಯುವಕರು ಚಿಂತಿಸುತ್ತಿದ್ದಾರೆ. ಕುಸುಮಬಾಲೆಯಲ್ಲಿ ಅಮಾಸ ಸೈಕಲ್ ಮೇಲೆ ಬರುತ್ತಿದ್ದಾಗ

ಇಸ್ಪೀಟ್ ಆಡುತ್ತಿದ್ದ ಸವರ್ಣೀಯನೊಬ್ಬನಿಗೆ ಆಟವು ಸಾಕಾಗಿದೆ. ಅವನು ಆಟವನ್ನು ನಿಲ್ಲಿಸಬೇಕಾಗಿದೆ. ಆತನಿಗೆ ಆಟದಲ್ಲಿ ತುಂಬ ಹಣ ಬಂದಿದೆ. ಅದನ್ನು ತೆಗೆದುಕೊಂಡು ಅವನು ಮನೆಗೆ ಹೊಗಬೇಕು ಆ ಕಾರಣಕ್ಕಾಗಿ ಉಳಿದ ಆಟಗಾರರ ಲಕ್ಷ್ಯವನ್ನು ಬೇರೆಕಡೆಗೆ ತಿರುಗಿಸಲು ಯಾವುದೇ ತಪ್ಪು ಮಾಡದ ಅಮಾಸನನ್ನು ಕಂಡು ಹಲ್ಲು ಕಡಿಯುತ್ತಾನೆ. ಮರಣ ಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿನ ಬಸವರಾಜುವಿನದು ಕ್ರಾಂತಿಕಾರಕ ಪಾತ್ರ ಆತ ಸೇಡಿಗೆ ಸೇಡು ಎಂಬ ಮನೋಭಾವನ್ನು ಹೊಂದಿದ್ದಾನೆ. ಈ ಕಾರಣಕ್ಕಾಗಿ ಆತ ಪಟೇಲರ ಮಗ ನಿಂಗಪ್ಪನಿಗೆ ಶಿಕ್ಷೆವಿಧಿಸುವುರ ಬದಲು ಆತನ ಹೆಂಡತಿಯ ಮೇಲೆ ಅತ್ಯಾಚಾರ ನಡೆಸುತ್ತಾನೆ. ಕುವೆಂಪು ಕಾದಂಬರಿಗಳಲಿ ಸೇಡಿನ ಭಾಗಗಳು ದಾಖಲಾಗಿವೆ. ತನ್ನನ್ನು ದಂಡಿಸಿದ ಇಜಾರದಸಾಬಿಯ ಮೇಲೆ ಸಣ್ಣ ಬೀರನಿಗೆ ಸಿಟ್ಟು ಹುಟ್ಟಿ ಸೇಡು ತೀರಿಸಿಕೊಳ್ಳುವ ಪ್ರಸಂಗ ಬರುತ್ತದೆ. ಇದರಂತೆ ಹಳೆ ಪೈಕದವರಿಗೆ ಒಕ್ಕಲಿಗರು ಹೇರಿದ್ದ ನಿರ್ಬಂಧಗಳನ್ನು ತೊಡೆದು ಹಾಕುವ ಮನೋಭಾವವನ್ನು ಅವರು ಈ ರೀತಿ ವ್ಯಕ್ತ ಪಡಿಸುತ್ತಾರೆ. "ಅವರಿಗಿಂತ ನಾವೇನು ಕಡಿಮೆ? ನಮ್ಮ ಕುದುರೆ, ನಮ್ಮ ದಂಡಿಗೆ, ನಮ್ಮ ವಾದ್ಯ, ನಮ್ಮ ಬೋವಿಗಳು! ನಮ್ಮ ದುಡ್ಡು ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ ?"(ಕುವೆಂಪು:೧೯೯೨ : ೧೩) ಎಂಬ ಸಂಪ್ರದಾಯದ ಭಂಜಕ ನೆಲೆಯನ್ನು ಹಳೆ ಪೈಕದವರು ಹೊಂದಿರುವುದನ್ನು ನೋಡಬಹುದು ಆದರೆ ದಲಿತ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಜಾತಿ ನಿವಾರಣೆಯ ಅಥವಾ ಜಾತಿ ಪ್ರತಿರೋಧದ ಧೋರಣೆ ಕುವೆಂಪು ಕಾದಂಬರಿಗಳಲ್ಲಿ ಅಭಿವ್ಯಕ್ತವಾಗಿಲ್ಲ. ಏಕೆಂದರೆ ಕುವೆಂಪುರವರ ಕಾದಂಬರಿ ರಚನೆಯ ಸಂದರ್ಭದಲ್ಲಿ ಈ ಜಾತಿ ನಿರ್ಮೂಲನೆ ಮಾಡುವ ಅದರ ವಿರುದ್ಧ ಪ್ರತಿಪಟಿಸುವ ಮನೋಭಾವದ ದಲಿತರು ಅಂದಿನ ಸಂದರ್ಭಗಳಲ್ಲಿ ಇರಲಿಲ್ಲ ಎಂಬುದು ಪ್ರಮುಖವಾದದು.

**೨. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಮತಾಂತರ ಸಮಸ್ಯೆಗಳು :** ಕ್ರೈಸ್ತ ಧರ್ಮವು ಭಾರತಕ್ಕೆ ಕ್ರಿ ಶ. ೬೦ ಅಥವಾ ೭೦ರ ಸುಮಾರಿಗೆ ಬಂದಿರಬಹುದು ಎಂದು 'ಜೋಗನ್ ಕಾಕರ' ಅವರು ಅಭಿಪ್ರಾಯ ಪಡುತ್ತಾರೆ. ಆದರೆ ಸಾಜಾನ್ ಫರ್ನಾಂಡಿಸ್ ಎಂಬುವರು ಇದು ಒಂದನೇ ಶತಮಾನದಲ್ಲೇ ಭಾರತದ ಜನತೆಗೆ ಪರಿಚಯವಿತ್ತು. ಎಂಬ ಅಭಿಪ್ರಾಯ ಪಡುತ್ತಾನೆ. ಮತಾಂತರ ಪದ್ದತಿ ಹಿಂದೂ ಧರ್ಮಕ್ಕೆ ದೊಡ್ಡ ಸವಾಲಾಗಿದೆ. ನಿರ್ದಿಷ್ಟ ಉದ್ದೇಶಗಳಿಗಾಗಿ ಒಬ್ಬ ವ್ಯಕ್ತಿ ಅಥವಾ ಸಮುದಾಯವನ್ನು ಅವನ ಮೂಲ ಧರ್ಮದಿಂದ ಬೇರೆ ಧರ್ಮಕ್ಕೆ ಸೇರಿಸುವುದನ್ನು ಮತಾಂತರ ಎಂದು ಕರೆಯಬಹುದು. ಈ ಪ್ರಕ್ರಿಯ ಕೆಲವೊಮ್ಮೆ ವ್ಯಕ್ತಿಯ ಸ್ವತಃ ನಿರ್ಧಾರದಿಂದ ಉಂಟಾದರೆ ಕೆಲವೊಮ್ಮೆ ಬಲತ್ಕಾರದಿಂದ ಮತಾಂತರ ಮಾಡಲಾಗುತ್ತದೆ. ಮತಾಂತರ ಪ್ರಕ್ರಿಯೆಗೆ ಬಹಳ ಹಿಂದಿನ ಇತಿಹಾಸವಿದೆ. ಬದ್ಧನ ಕಾಲದಿಂದಲೂ ಈ ಪ್ರಕ್ರಿಯೆ ಚಲಾವಣೆಯಲ್ಲಿ ಇದೆ. ಮತಾಂತರದೊಳಗೆ ಎರಡು ರೀತಿಯ ಮತಾಂತರಗಳಿವೆ. ಒಂದು ಹಿಂದೂ ಧರ್ಮದ ಕಕ್ಷೆಯೊಳಗೆ ನಡೆಯುವ ಮತಾಂತರ. ಈ ಸಂದರ್ಭದಲ್ಲಿ ಮತಾಂತರಗೊಳ್ಳುವ ವ್ಯಕ್ತಿ ಅಥವಾ ಸಮುದಾಯ ಹಿಂದೂ ಧರ್ಮಗಳಿಗೆ ಮತಾಂತರಗೊಳ್ಳುವುದು. ಎರಡನೆಯದು ಹಿಂದೂ ಧರ್ಮಕ್ಕಿಂತ ಭಿನ್ನವಾದ ಇತರ ಧರ್ಮಗಳಾದ ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳಿಗೆ ಮತಾಂತರಗೊಳ್ಳುವುದು ಇವೆರಡು ಮತಾಂತರದ ರೀತಿಗಾಳಗಿವೆ. ಇಂತಹ ಮತಾಂತರಗಳು ಮುಖ್ಯವಾಗಿ ಶೂದ್ರ ಸಮುದಾಯ ಹಾಗೂ ಇತರ ಕೆಳ ಜಾತಿಗಳಲ್ಲಿ ಇವು ನಡೆಯುತ್ತವೆ. ಇಸ್ಲಾಂ ಹಾಗೂ ಕ್ರೈಸ್ತ ಧರ್ಮದ ಕೆಲವು ಅಮಿಷಗಳಿಗೆ ಒಳಗಾಗಿ ಮೇಲಿನ ಶೂದ್ರ ಹಾಗೂ ದಲಿತ ಸಮುದಾಯದ ಜನರು ಮತಾಂತರಗೊಳ್ಳುತ್ತಾರೆ. ದಲಿತರಲ್ಲಿ ಮೇಲ್ವರ್ಗದವರ ಶೋಷಣೆಯಿಂದ

ಬಿಡುಗಡೆ ಪಡೆಯಲು ಹೆಚ್ಚಿನ ಮತಾಂತರ ಪ್ರಕ್ರಿಯೆಗಳು ನಡೆಯುತ್ತವೆ. ಈ ಕುರಿತು ಅಂಬೇಡ್ಕರ್ ರವರು ೧೯೩೬ರಲ್ಲಿ 'ಮಹರ್ ಸಮ್ಮೇಳನ'ದಲ್ಲಿ ಮಾತಾನಾಡುತ್ತಾ ಮತಾಂತರ ದಲಿತರಿಗೆ ಏಕೆ ಬೇಕು ? ಎಂಬ ವಿಚಾರ ಸಂಕಿರಣದಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ. 'ಭಾರತಕ್ಕೆ ಸ್ವರಾಜ್ಯ ಎಷ್ಟು ಅಗತ್ಯವೋ ಅಸ್ಪೃಶ್ಯರಿಗೆ ಮತಾಂತರ ಅಷ್ಟೇ ಅಗತ್ಯವೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಗುತ್ತದೆ. ' ಎರಡರ ಅಂತಿಮ ಗುರಿಯು ಒಂದೇ. ಈ ಗುರಿ ಎಂದರೆ ಸ್ವಾತಂತ್ರ್ಯದ ಗಳಿಕೆ' ಎಂಬುದಾಗಿ ತಮ್ಮ ದಿಟ್ಟ ನಿರ್ಧಾರವನ್ನು ತಿಳಿಸಿದ್ದಾರೆ. ಈ ಕಾರಣಕ್ಕಾಗಿ ಅವರು ಹಿಂದೂ ಧರ್ಮವನ್ನು ತೊರೆದು ಬೌದ್ಧ ಧರ್ಮವನ್ನು ಸ್ವಿಕರಿಸಿದರು. ಹಿಂದೂ ಧರ್ಮದಲ್ಲಿನ ಅಸಮಾನತೆಯ ನಿರ್ಮೂಲನೆಯ ಬಗ್ಗೆ ಹಿಂದೂ ಸಮಾಜ ಸುಧಾರಣಾವಾದಿಗಳಾಗಲಿ ಅಥವಾ ಬ್ರಿಟಿಷರಾಗಲಿ ಪ್ರಮಾಣಿಕ ಪ್ರಯತ್ನ ಮಾಡಲಿಲ್ಲ. ಈ ಕಾರಣದಿಂದ ಹಾಗೂ ಹಿಂದೂ ಧರ್ಮದಲ್ಲಿ ಹಾಸುಹೊಕ್ಕಾಗಿದ್ದ ಕೆಲವು ನಂಬಿಕೆಗಳನ್ನು ತೊಲಗಿಸಲು ಜಾತಿ ವ್ಯವಸ್ಥೆ ಅಸ್ತಿತ್ವದಲ್ಲಿರುವವರೆಗೂ ಸಾಧ್ಯವಿಲ್ಲ ಎಂಬ ನಂಬಿಕೆಯನ್ನು ಅಂಬೇಡ್ಕರ್‌ರವರು ಹೊಂದಿದ್ದರು.

ಕುವೆಂಪುರವರು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಮತಾಂತರ ಸಮಸ್ಯೆಯನ್ನು, ಕ್ರಿಶ್ಚಿಯನ್ ಪಾದ್ರಿಗಳ ಸಮಯಸಾದಕತನವನ್ನು ಸಮಗ್ರವಾಗಿ ಚಿತ್ರಿಸಿದ್ದಾರೆ. ಈ ಕಾದಂಬರಿಯ ದಲಿತ ಪಾತ್ರಗಳಿಗೆ ಮತಾಂತರ ಪ್ರಕ್ರಿಯೆಯಲ್ಲಿ ಅಂತಹ ಆಸಕ್ತಿ ಇಲ್ಲ. ಇದು ಅನೇಕ ಶೂದ್ರರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿದೆ. ಇಲ್ಲಿನ ಪ್ರಭಾವಿ ಒಕ್ಕಲಿಗರನ್ನು ಮತಾಂತರಿಸಿದರೆ ಮಿಕ್ಕ ಜನರನ್ನು ಸುಲಭವಾಗಿ ತನ್ನೆಡೆಗೆ ಸೆಳೆದುಕೊಳ್ಳಬಹುದು ಎಂಬುದು ಪಾದ್ರಿ ಜೀವರತ್ನಯ್ಯನ ಲೇಕ್ಕಾಚಾರವಾಗಿದೆ. ಇವನ ಉಪಾಯಗಳನ್ನು ಹೀಗೆ ಚಿತ್ರಿಸುತ್ತಾರೆ. "....... ದೀವದಾನೆ ಕಾಡಾನೆಯನ್ನು ಆಕರ್ಷಿಸಿ ಖೆಡ್ಡಾಕ್ಕೆ ಕೆಡಹಲು ಪ್ರಯತ್ನಿಸುವಂತೆ, ಪಾದ್ರಿ ಜೀವರತ್ನಯ್ಯ ಚಿನ್ನಪ್ಪನ ಕಾಲಡಿಯ ಕುರುಡು ಆಚಾರ ಮತ್ತು ಮೂಢನಂಬಿಕೆಗಳ ಭೂವಿಯನ್ನು ಸಡಿಲಗೊಳಿಸಿ, ಅಗೆದು ತೆಗೆದು, ಕ್ರೈಸ್ತ ಮತದ ಖೆಡ್ಡಾಕ್ಕೆ ಕಂದಕವನ್ನು ಮೆಲ್ಲಗೆ ನಿರ್ಮಿಸುತ್ತಿದ್ದನು." ( ಕುವೆಂಪು : ೧೯೬೭ : ೨೦೪). ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಕ್ರಿಶ್ಚಿಯನ್ ಪಾದ್ರಿಗಳ ತಂತ್ರವನ್ನು ಕುವೆಂಪುರವರು ಮೇಲಿನ ಅಭಿಪ್ರಾಯದಲ್ಲಿ ಹೇಳಿದ್ದಾರೆ. ಜೀವರತ್ನಯ್ಯನಿಗೆ ಮಲೆನಾಡಿನ ಹೆಚ್ಚು ಜನರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸಿ ತಾನು ಆ ಮೂಲಕ ಬಡ್ತಿಯನ್ನು ಪಡೆಯುವ ಯೋಚನೆಯಲ್ಲಿದ್ದಾನೆ. ಇವನ ತಂತ್ರವನ್ನು ಒಕ್ಕಲಿಗ ಸಮುದಾಯದ ಚಿನ್ನಪ್ಪನಾಗಲೀ ಅಥವಾ ದೇವಯ್ಯನಾಗಲೀ ಸಂಪೂರ್ಣವಾಗಿ ತಿಳಿದುಕೊಂಡವರಲ್ಲ ಪಾದ್ರಿಯ ಅಮಿಷಗಳಿಗೆ ಒಳಗಾಗಿ ಈ ಧರ್ಮವನ್ನು ಸ್ವಿಕರಿಸಲು ಮುಂದಾಗಿದ್ದಾರೆ. ಚಿನ್ನಪ್ಪ ದೇವಯ್ಯನವರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳ್ಳುವ ಮೊದಲು ಅವರಲ್ಲಿ ಕೆಲವೊಂದು ಬದಲಾವಣೆಗಳಾಗುತ್ತವೆ. ಅದನ್ನು ಕುವೆಂಪುರವರು ಹೀಗೆ ಚಿತ್ರಿಸುತ್ತಾರೆ. "......ಕ್ರಮೇಣ ದೇವಯ್ಯ ಮಿಂದು ಉಣ್ಣುವುದಕ್ಕೆ ಹೋಗುವ ಮೊದಲು ಹಣೆಗೆ ನಾಮ ಇಟ್ಟಿಕೊಳ್ಳುವುದನ್ನು ಬಿಟ್ಟಿದ್ದನ್ನೂ, ತುಳಸಿ ಕಟ್ಟೆಗೆ ಸುತ್ತು ಬರುವುದೆ ಮೊದಲಾದ ಧಾರ್ಮಿಕಾಚಾರಗಳನ್ನು ತ್ಯಜಿಸಿದ್ದನು. ದೆಯ್ಯ ದ್ಯಾವರು ಸತ್ಯನಾರಾಯಣ ವೃತ್ತ ಇವುಗಳನ್ನೇಲ್ಲಾ ಹೀಯಾಳಿಸತೊಡಗಿದ್ದನ್ನೂ ತಂದೆ ತಾಯಿ ಹೆಂಡತಿಯರಲ್ಲದೆ ನೆಂಟರೂ ಆಳು ಕಾಳುಗಳು ಗಮನಿಸಿ ಪಾದ್ರಿ ಮಂಕುಬೂದಿ ಹಾಕಿರಬೇಕೆಂದೂ ಭಾವಿಸಿದ್ದರು".೬ ಮಲೆನಾಡಿನ ಒಕ್ಕಲಿಗರು ಸಂಪ್ರದಾಯವಾದಿಗಿಳಾಗಿದ್ದರೂ ಜೀವರತ್ನಯ್ಯನ ಸಂಪರ್ಕದಿಂದ ದೇವಯ್ಯ ಈ ಧಾರ್ಮಿಕ ಸಂಪ್ರದಾಯಗಳನ್ನು ಹಿಂದೂ ಧರ್ಮದಲ್ಲಿನ ಮೌಢ್ಯ ಆಚರಣೆಗಳನ್ನು, ಜಾತಿ ಪದ್ಧತಿ ಮುಂತಾದ ಅನಿಷ್ಟ ಪದ್ಧತಿಗಳನ್ನು ತೀವ್ರವಾಗಿ ಖಂಡಿಸುತ್ತಿದ್ದನು. ಕುವೆಂಪುರವರು ದೇವಯ್ಯನ ಪಾತ್ರದ ಮೂಲಕ ಹಿಂದೂ

ಧರ್ಮದ ಅಂದಾಚಾರಗಳನ್ನು ಖಂಡಿಸುತ್ತಿದ್ದಾರೆ. ಕ್ರಿಶ್ಚಿಯನ್ ಪಾದ್ರಿಗಳ ಸಂಪರ್ಕದಿಂದ ದೇವಯ್ಯ ವಿಶಾಲ ಮನೋಭಾವವನ್ನು ಗಳಿಸಿಕೊಂಡು ಪ್ರಗತಿಪರ ಚಿಂತನೆಯ ಕಡೆಗೆ ಯೋಚಿಸುತ್ತಿದ್ದಾನೆ. ಈ ಚಿಂತನೆ ಉಳಿದ ಒಕ್ಕಲಿಗರಿಗೆ ಅಸಹನೆಯನ್ನು ಉಂಟು ಮಾಡಿದೆ. ಸುಬ್ಬಣ್ಣ ಹೆಗ್ಗಡೆ ಹಾಗೂ ಗುತ್ತಿಯ ಸಂಭಾಷಣೆಯಲ್ಲಿ ಈ ಅಂಶವನ್ನು ಗುರುತಿಸಬಹುದು. " ಅಂತೂ ಆ ಪಾದ್ರಿಯಿಂದ ಸುಖಾ ಇಲ್ಲಾ ಅಂತ ಕಾಣದೆ ಬೀಸೆಕಲ್ಲು ಸವಾರಿ, ಹೊಗೇಬತ್ತಿಸೇದೋದು, ಮುಂಜುಟ್ಟುಬಿಡೋದು. ಇನ್ನೂ ಏನೇನೋ ಯಕ್ಷಣಿಮಾಡಿ, ಜಾತಿ ಕೆಡಿಸಿ ಕಿಲಸ್ತರ ಮತಕ್ಕೆ ಸೇರಿಸಕ್ಕೆ ಹುನಾರು ಮಾಡ್ತಿದಾನೆ ನಿನ್ನ ಬೆಟ್ಟಳ್ಳಿ ಸಣ್ಣಗೌಡರೂ ಅವನ ಬಲೆಗೆ ಬೀಳಾಹಂಗೆ ಕಾಣ್ತದೆ.

............ ಏನಾದ್ರು ಸಾಯ್ಲಿ ಹಾಳಾಗೇ ಹೋಗ್ತೀವಿ ಅನ್ನೋರ್ನ ಯಾರು ಉದ್ಧಾರ ಮಾಡಾಕೆ ಆಗ್ತದೆ ? ಅವನು ಒಬ್ಬಂಟಿಗ ಆಗಿದ್ರೆ, ಎತ್ಲಾಗಾದರೂ ಸಾಯಿ, ಯಾವ ಜಾತಿಗಾದರೂ ಸೇರು ಅನ್ನ ಬೈದಾಗಿತ್ತು. ಹೆಂಡ್ತಿಮಕ್ಕಳು ಬ್ಯಾರೆ ಇವೆಯಲ್ಲಾ ಅವ್ರ ಗತಿ ಏನು ? ಅವರಿನ್ನೂ ಕೆರೇನೋ ಬಾವಿನೊ ಹುಡುಕಬೇಕಲ್ಲಾ."೭ ಎಂಬ ಹೇಳಿಕೆಯಲ್ಲಿ ಸುಬ್ಬಣ್ಣ ಹೆಗಡೆಯವರ ಅತಂಕವನ್ನು ಕಾಣಬುಹುದು. ಹಿಂದೂ ಧರ್ಮವನ್ನು ತ್ಯಜಿಸಿದ ನಂತರ ಬದುಕುವುದಕ್ಕಿಂತ ಸಾಯುವುದೇ ಲೇಸು ಎಂಬ ಅಭಿಪ್ರಾಯ ಹೆಗ್ಗಡೆಯವರದು ತಲತಲಾಂತರದಿಂದ ನಂಬಿಕೊಂಡು ಬಂದಿರುವ ಜಾತಿ, ದೈವ ಇವುಗಳಿಂದ ವಿಮುಕ್ತಿ ಪಡೆಯುವುದು ಸುಲಭದ ಮಾತಲ್ಲ ಎಂಬದುದು ಮೇಲಿನ ಹೇಳಿಕೆಯಿಂದ ತಿಳಿಯುತ್ತದೆ. ಸಮಾಜದಲ್ಲಿ ಉಂಟಾಗುತ್ತಿರುವ ಸಾಂಸ್ಕೃತಿಕ, ಸಾಮಾಜಿಕ ಬದಲಾವಣೆಗಳಿಗೆ ಹಿರಿಯ ಜೀವವಾದ ಸುಬ್ಬಣ್ಣ ಹೆಗಡೆಯವರು ಹೊಂದಿಕೊಳ್ಳಲು ಪ್ರಯಾಸ ಪಡುವುದನ್ನು ನೋಡಬಹುದು. ಇದು ಮೇಲ್ಜಾತಿಯ ಒಕ್ಕಲಿಗರು ಮತಾಂತರ ಪ್ರಕ್ರಿಯೆಯಿಂದ ಅನುಭವಿಸುವ ನೋವಾದರೆ ಇನ್ನು ದಲಿತ ಸಮುದಾಯದವರು ಕ್ರಿಶ್ಚಿಯನ್ ಧರ್ಮದ ಬಗ್ಗೆ ಹಾಗೂ ಅದನ್ನು ಸ್ವೀಕರಿಸಲು ಮುಂದಾಗಿರುವ ದೇವಯ್ಯನವರ ಬಗ್ಗೆ ದಲಿತರ ಅಭಿಪ್ರಾಯವನ್ನು ಗಮನಿಸಿದರೆ ಅವರಿಗಿರುವ ತಿರಸ್ಕಾರ ಮನೋಭಾವ ತಿಳಿಯುತ್ತದೆ. "ಅಲ್ಲಾ...............ಅದೆಲ್ಲಾ ಸರಿ ಆದರೆ ಗಾಡಿ ಹೊಡೆಯೋಕೆ ಆ ಬಚ್ಚನ್ನ ಇಟ್ಕೊಂಡಿದಾರಂತಲ್ಲೋ ? ಗೌಡರ ಮನೆಲಿ ಹೊಲೇರನ್ನ ಒಳಂಗಳಕ್ಕೆ ಕಾಲಿಡೋಕೆ ಬಿಡಾದಿಲ್ಲ ಅಂತಲ್ಲಿ ಇವರು ಅವನ್ನ ಗಾಡಿ ಓಡಿಯೋಕೆ ಇಟ್ಟುಕೊಂಡೂ, ಅವನ ಕೈಲಿ ಮುಟ್ಟಿಸ್ಕೊಂಡೂ......ಥೂ.ಥೂ.ಥೂ ಕೆಲಸ್ತರು ಮಾಡಿದ್ಹಾಂಗೆ ಮಾಡ್ತೀದರಲ್ಲೋ.

ಅದೆಲ್ಲಾ ಆ ಪಾದ್ರಿ ಹಾಕಿರೋ ಮಂಕುಬೂದಿದೆಸೆ ಕಾಣೋ! ಅವರನ್ನು ತೀರ್ಥಹಳ್ಳಿ ಪ್ಯಾಟೆಗೆ, ಶಿಮೊಗ್ಗಾ ಷಹರಿಗೆ ಕರಕೊಂಡುಹೋಗಿ, ಕುಣಿಸಿ ಆ ಯೂರೋಫೇನ್ ಬಿಳಿ ದೊರೆ ಪಾದ್ರಿ ಇದಾನಂತಲ್ಲಾ ಅವನ ಹತ್ರಾನು ಬೋದ್ನೆ ಮಡ್ಸಿ, ಕುಡಿಸಿ, ಕುಣಿಸಿ ಅವರ ಬುದ್ದೀನೆ ಕೆಡಿಸಿ ಬಿಟ್ಟದಾನಂತೆ-"೮ ಎಂಬ ಗುತ್ತಿಯ ಮಾತಿನಲ್ಲಿ ದೇವಯ್ಯನವರ ಮತಾಂತರದಿಂದ ಉಂಟಾಗುವ ಅಪಾಯಗಳನ್ನು, ಅವರು ನಂಬಿಕೊಂಡಿದ್ದ ನಂಬಿಕೆಗಳಿಗೆ ವಿರುದ್ದವಾದ ನಡವಳಿಕೆಗಳನ್ನು ಕಂಡು ಆಶ್ಚರ್ಯ ಚಕಿತರಾಗಿದ್ದಾರೆ. ಕ್ರೈಸ್ತ ಧರ್ಮದಲ್ಲಿನ ಆಚರಣೆಗಳು ಮಲೆನಾಡಿನ ದಲಿತರಿಗೆ ಹಾಗೂ ಮೇಲ್ವರ್ಗದವರಿಗೆ ಅಸಹನೆಯನ್ನುಂಟು ಮಾಡಿರುವುದನ್ನು ಮೇಲಿನ ಹೇಳಿಕೆಗಳಲ್ಲಿ ನೋಡಬಹುದು. ಈ ಧರ್ಮವನ್ನು ಸ್ವೀಕರಿಸುತ್ತಿರುವವರ ಬಗ್ಗೆ ತಮಗಿರುವ ತಿರಸ್ಕಾರ ಭಾವವನ್ನು ದಲಿತರು ಒಮ್ಮೆ ಹೀಗೆ ವ್ಯಕ್ತಪಡಿಸುತ್ತಾರೆ. ".......ಬಚ್ಚನಿಗೆ ಹೇಳಿದ್ರಂತೆ ಆ ದೊಡ್ಡ ಬೀರನ ಬಿಡಾರದವರು.............ಹೇಳಿದ್ರಂತೆ ಆ ದೊಡ್ಡ ಬೀರನ ಕಡೆಯವರು ನಮ್ಮ ಗಾಡಿ ಬಚ್ಚನಿಗೆ 'ನಿನಗ್ಯಾರೋ ಹೆಣ್ಣು ಕೊಡ್ತಾರೆ! ಸಣ್ಣಗೌಡ್ರು ತಾಂವೂ ಜಾತಿಕೆಡೋದಲ್ಲದೆ ನಿನ್ನ ಜಾತಿ ಕೆಡಿಸಾಕೆ ಹೊಲ್ಟಾರೆ ! ನಮಗೆ ಇಷ್ಟಾ ಇಲ್ಲಪ್ಪ, ಜಾತಿ ಕೆಡಾಕೆ! ಅಂತಾ."..(ಕುವೆಂಪು : ೧೯೯೨ : ೩೫೩) ಕುವೆಂಪು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ ಪಾತ್ರಗಳಲ್ಲಿ ಬಚ್ಚನೊಬ್ಬನನ್ನು ಬಿಟ್ಟರೆ ಯಾರು ಕ್ರಿಶ್ಚಿಯನ್ ಧರ್ಮದ ಬಗ್ಗೆ ಆಸಕ್ತಿಯನ್ನು

ಹೊಂದಿಲ್ಲ. ಬಚ್ಚನು ದೇವಯ್ಯನವರ ಆಳು ಮಗನಾದ್ದರಿಂದ ಅವರ ಪ್ರಭಾವಕ್ಕೆ ಒಳಗಾಗಿದ್ದಾನೆ. ಮಿಕ್ಕವರು ಪಾದ್ರಿಯ ಪ್ರಭಾವದಿಂದ ತಪ್ಪಿಸಿಕೊಳ್ಳುತ್ತಾರೆ. ಬಚ್ಚ ಕ್ರಿಶ್ಚಿಯನ್ ಮತವನ್ನು ಸೇರುತ್ತಾನೆ ಎಂಬ ಕಾರಣಕ್ಕಾಗಿ ದೊಡ್ಡ ಬೀರನ ಮಗಳು ತಿಮ್ಮಿಯನ್ನು ಬಚ್ಚನಿಗೆ ಕೊಡಲು ದೊಡ್ಡಬೀರ ನಿರಾಕರಿಸುತ್ತಾನೆ.

ಕಾರಂತರ ಕಾದಂಬರಿಗಳಾದ ಕುಡಿಯರ ಕೂಸು ಹಾಗೂ ಚೋಮನ ದುಡಿ ಕಾದಂಬರಿಗಳಲ್ಲಿಯು ದಲಿತರ ಮತಾಂತರ ಪ್ರಸಂಗಗಳು ಉಲ್ಲೇಖವಾಗಿವೆ. ಕುಡಿಯರ ಕೂಸುವಿನಲ್ಲಿ ಹಿರಿಮಲೆ ಕಾಫಿ ತೋಟದ ಉಸ್ತುವಾರಿಗಾಗಿ ಬಂದ 'ವಲ್ಲಬ್ರಿಗಾಂಜಾ' ಎಂಬುವನು ಚೋಮನ ಮಗಳು ಗಿಡ್ಡಿಯನ್ನು ವಿವಾಹವಾಗುವುದಾಗಿ ಅವಳ ತಂದೆಗೆ ಬಲವಂತದಿಂದ ಒಪ್ಪಿಸಿ ಕಾರ್ಕಳಕ್ಕೆ ಕರೆದುಕೊಂಡು ಹೋಗುತ್ತಾನೆ. ಹೀಗೆ ಕರೆದುಕೊಂಡು ಹೋದ ಅವನು ಅವರ ಉಡುಗೆಗಳನ್ನು, ಮತವನ್ನು ಬದಲಾಯಿಸುತ್ತಾನೆ. ಇಂತಹ ವಂಚಕ ವೃತ್ತಿಯಿಂದಲು ಮತಾಂತರ ಗೊಳಿಸುತ್ತಿದ್ದ ಪ್ರಕರಣಗಳು ಈ ಕಾದಂಬರಿಯಿಂದ ತಿಳಿದುಬಂದಿದೆ. ಚೋಮನ ದುಡಿ ಕಾದಂಬರಿಯಲ್ಲಿ ಚೋಮ ಮತಾಂತರನಾಗಲು ನಿರಾಕರಿಸಿ ತನ್ನ ಹಳೆಯ ಸಂಪ್ರದಾಯಗಳಿಗೆ ಜೋತುಬೀಳುತ್ತಾನೆ ಚೋಮನನ್ನು ತಮ್ಮ ಮತಕ್ಕೆ ಸೆಳೆಯಲು ಕ್ರಿಶ್ಚಿಯನ್ ಪಾದ್ರಿ ಕೆಳಗಿನಂತೆ ಹೇಳುತ್ತಾನೆ. "ಅವೆಲ್ಲ ಇಗರ್ಜಿ ಆಸ್ತಿ, ನಮ್ಮ ಜಾತಿಯವರಿಗಲ್ಲದೆ ಇತರರಿಗೆ ಗೇಣಿಗೆ ಕೊಡಲು ಸಾಧ್ಯವಿಲ್ಲ. ಚೋಮ ನೀನು ಹಾಳಾದ ಅವರಿವರ ಚಾಕರಿ ಮಾಡಿಕೊಂಡಿರುವ ಬದಲು ಕ್ರಿಶ್ಚಿಯನ್ನನಾಗಿ ಸ್ವತಂತ್ರವಾಗಿರಬಾರದೆ " (ಶಿವರಾಮ ಕಾರಂತ : ೧೯೩೩ : ೪೪) ಎಂಬ ಆಮಿಷವನ್ನು ಒಡ್ಡುತ್ತಾನೆ. ಚೋಮನಿಗೆ ಭೂಮಿಯ ಮೇಲೆ ಮೋಹವಿದೆ. ಅದಕ್ಕಿಂತ ಹೆಚ್ಚಾಗಿ ತನ್ನ ದೈಯ್ಯ, ಭೂತದ ಬಗ್ಗೆ ಹೆದರಿಕೆಯು ಸಹ ಈ ಕಾರಣಕ್ಕಾಗಿ ಅವನು ಮತಾಂತರ ಹೊಂದಿ ಭೂಮಿ ಉಳುಮೆ ಮಾಡುವ ಅವಕಾಶದಿಂದ ವಂಚಿತನಾಗುತ್ತಾನೆ. ಆದರೆ ಆತನ ಮಗ ಗುರುವ ಕ್ರಿಶ್ಚಿಯನ್ ಮಾರಿಯಮ್ಮಳನ್ನು ಮದುವೆಯಾಗಿ ಸ್ವಂತ ಭೂಮಿಯ ಒಡೆಯನಾಗುತ್ತಾನೆ.

ದಲಿತ ಕಾದಂಬರಿಗಳಲ್ಲಿ ಮತಾಂತರದ ಪ್ರಶ್ನೆ ಕುರಿತು ಕಡಿಮೆ ಪ್ರಮಾಣದಲ್ಲಿ ದಾಖಲಾಗಿದೆ. ಮುಳ್ಳೂರು 'ನಾಗರಾಜರವರ ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಮುಸ್ಲಿಂ ಸಮುದಾಯದ ಬೇಗಂ ಹಾಗೂ ದಲಿತರ ದೇವರಸು ಪರಸ್ಪರ ಪ್ರೀತಿಸುತ್ತಾರೆ. ಅವರ ವಿವಾಹಕ್ಕೆ ಧರ್ಮದ ಅಡ್ಡಿಯಾಗುತ್ತದೆ. ದಲಿತನೋರ್ವ ತಮ್ಮ ಹೆಣ್ಣನ್ನು ಬಯಸಿದ್ದು ಮುಸ್ಲಿಂ ಸಮುದಾಯದವರಿಗೆ ಇರಿಸು-ಮುರಿಸಾಗುತ್ತದೆ. ಇದರಿಂದ ಅವರು ಒಂದು ತೀರ್ಮಾನಕ್ಕೆ ಬರುತ್ತಾರೆ. ಇಸ್ಲಾಂ ಧರ್ಮಕ್ಕೆ ದೇವರಸು ಮತಾಂತರ ಹೊಂದಿದರೆ ಬೇಗಂಳೊಂದಿಗಿನ ವಿವಾಹ ಸಾಧ್ಯತೆಯನ್ನು ಹೇಳುತ್ತಾರೆ. ಅವರ ಪ್ರಕಾರ ದೇವರಸು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದರೆ ಆತ ಕೀಳುಜಾತಿಯ ಅಪಮಾನ ಇಲ್ಲವಾಗುವುದು ಎಂಬ ನಂಬಿಕೆಯನ್ನು ಮುಸ್ಲಿಂ ಸಮುದಾಯದ ಜನರು ಹೊಂದಿರುವಂತಿದೆ. ಕಡೆಗೆ ದೇವರಸು ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳಲು ನಿರಾಕರಿಸುತ್ತಾನೆ. ಪರಿಣಾಮವಾಗಿ ದೇವರಸು ಬೇಗಂರ ವಿವಾಹ ಮುರಿದು ಬೀಳುತ್ತದೆ. ಇಲ್ಲಿ ವಿದ್ಯಾವಂತ ದಲಿತ ಸಮುದಾಯದವರು ಕ್ರೈಸ್ತ ಅಥವಾ ಇಸ್ಲಾಂ ಧರ್ಮಗಳ ಆಕರ್ಷಣೆಗಿಂತ ಬೌದ್ಧ ಧರ್ಮದ ಕಡೆಗೆ ತಮ್ಮ ಆಸಕ್ತಿಯನ್ನು ವಹಿಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ವಲಸೆ ಹೋದದ್ದನ್ನು ದಲಿತರು ಒಪ್ಪಿಕೊಂಡಿರುವಂತಿದೆ. ಕುವೆಂಪುರವರು ಯಾವುದೆ ಧರ್ಮದ ಮತಾಂತರವನ್ನು ತಮ್ಮ ವೈಚಾರಿಕ ನೆಲೆಯಲ್ಲಿ ವಿರೋಧಿಸುತ್ತಿದ್ದದನ್ನು ಕಾಣುತ್ತೇವೆ. ಅವರ ಪ್ರಕಾರ ಮತಾಂತರವೆಂದರೆ 'ಬಾಣಲೆಯಿಂದ ಬೆಂಕಿಗೆ ' ಬೀಳುವ ಪ್ರಕ್ರಿಯೆ ಎಂಬ ಅಭಿಪ್ರಾಯವನ್ನು ಕುವೆಂಪುರವರು ವ್ಯಕ್ತಪಡಿಸುತ್ತಾರೆ.

೩. **ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಲೈಂಗಿಕ ಶೋಷಣೆಯ ಸ್ವರೂಪ** : ಭಾರತದ ಎಲ್ಲಾ ಸಮಾಜಗಳಲ್ಲೂ ಸ್ತ್ರೀ ದ್ವಿತಿಯ ದರ್ಜೆಯ ಪ್ರಜೆಯಾಗಿ ಬದುಕುತ್ತಿದ್ದಾಳೆ. ಈ ಕಾರಣಕ್ಕಾಗಿ ಅವಳನ್ನು ಪುರಷ ಪ್ರಧಾನ ವ್ಯವಸ್ಥೆ ದುರ್ಬಳತೆ ಮಾಡಿಕೊಳ್ಳುತ್ತಿದೆ. ಜೈವಿಕ ಕಾರಣಕ್ಕಾಗಿ ಸ್ತ್ರೀ ಇಂದು ಸಮಾಜದಲ್ಲಿ ಸಮಾನತೆಯನ್ನು ಕಳೆದುಕೊಂಡಿದ್ದಾಳೆ. ಮೇಲ್ವರ್ಗದ ದೃಷ್ಟಿಯಲ್ಲಿ ದಲಿತರು ಹೇಗೋ ಹಾಗೆ ದಲಿತ ಸಮುದಾಯದಲ್ಲಿ ಮಹಿಳೆ ಅತ್ಯಂತ ಕೆಳಗಿನ ಸ್ತರದಲ್ಲಿದ್ದಾಳೆ. ಇವಳು ಎರಡು ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ತನ್ನ ಒಡೆಯರಿಂದ ಲೈಂಗಿಕ ಶೋಷಣೆಯನ್ನು ಎದುರಿಸಿದರೆ ತನ್ನ ಸಮುದಾಯದಲ್ಲಿಯೇ ಹೆಣ್ಣೆಂಬ ಕಾರಣಕ್ಕಾಗಿ ಅವಳನ್ನು ಹಲವು ರೀತಿಯಲ್ಲಿ ಶೋಷಿಸಲಾಗುತ್ತದೆ. ಸ್ತ್ರೀಯ ಶೋಷಣೆಯ ನೆಲೆಗಳನ್ನು ಮುಂದೆ ಗಮನಿಸಬಹುದು. ಮೇಲ್ವರ್ಗದ ಸಮುದಾಯ ದಲಿತರನ್ನು ಶೋಷಿಸಲು ಆರ್ಥಿಕ, ಸಾಮಾಜಿಕ ಅಂಶಗಳು ಕಾರಣವಾಗಿರುತ್ತವೆ. ಆದರೆ ಮಹಿಳೆಯರ ಶೋಷಣೆಗೆ ಇದಕ್ಕಿಂತ ಭಿನ್ನ ನೆಲೆ ಇದೆ.

ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯರನ್ನು ಅದರಲ್ಲೂ ದಲಿತ ಮಹಿಳೆಯರನ್ನು ಧರ್ಮದ ಹೆಸರಿನಲ್ಲಿ ಶೋಷಿಸಲಾಗುತ್ತದೆ. ಹಲವು ದಲಿತ ಕಾದಂಬರಿಗಳು ಈ ಅಂಶಗಳನ್ನು ಒಳಗೊಂಡಿರುವುದನ್ನು ನೋಡಬಹುದು ಕುವೆಂಪು ಕಾದಂಬರಿಯಲ್ಲಿ ಬರುವ ಶೋಷಿತ ಮಹಿಳೆಯರ ಪಾತ್ರಗಳಲ್ಲಿ ಪ್ರಮುಖವಾದುವು ಅಕ್ಕಣಿ, ಕಾಡಿ ಇವರವು. ಇನ್ನು ಹಲವು ಮಹಿಳೆಯರು ಶೋಷಣೆಗೆ ಗುರಿಯಾದ ಸಂದರ್ಭಗಳು ಕುವೆಂಪು ಕಾದಂಬರಿಗಳಲ್ಲಿ ದಾಖಲಾಗಿವೆ. ಆದರೆ ಆ ಪಾತ್ರಗಲು ಮೇಲ್ಜಾತಿಯವು. ಈ ಕಾರಣಕ್ಕಾಗಿ ಎಲ್ಲಿ ಅಕ್ಕಣಿ, ಕಾಡಿ, ಇವರ ಶೋಷಣೆಯ ರೀತಿಯನ್ನು ಗಮನಿಸಬಹುದು. ಅಕ್ಕಣಿ ತನ್ನ ಕೌಟುಂಬಿಕ ಅತೃಪ್ತಿಯಿಂದ ಚೀಂಕ್ರನೊಂದಿಗೆ ಅನೈತಿಕ ಸಂಬಂಧ ಬೆಳೆಸುತ್ತಾಳೆ. ಹೀಗೆ ಸಂಬಂಧ ಬೆಳೆಸುವುದಕ್ಕೂ ಮುಂಚಿನ ಕುವೆಂಪು ಅವರ ವಿವರಣೆಯಲ್ಲಿ ಅಕ್ಕಣಿಯ ಅಸಹಾಯಕತೆ ಕಾಣಬಹುದು. "ಚೀಂಕ್ರನ ಬಿಡಾರದ ಮಗ್ಗುಲಿಲ್ಲಿಯೇ ಇದ್ದ ಪಿಜಿಣನ ಬಿಡಾರದಲ್ಲಿ ಅವನ ಹೆಂಡತಿ ಎಚ್ಚರವಾಗಿದ್ದರೂ ಪಕ್ಕದಲ್ಲಿ ಮಲಗಿದ್ದ ಗಂಡನ ರೋತೆಯನ್ನು ನೆನೆದು ಚಿಂತಿಸುತ್ತಾ ಮಲಗಿದ್ದಳು. ಅವನಿಗಿಂತ ಒಳ್ಳೆಯ ಗಂಡ ತನಗೆ ಸಿಕ್ಕುತ್ತಿರಲಿಲ್ಲ ನಿಜ ; ಆದರೆ ಒಂದು ಕೊರತೆ ಅವಳನ್ನು ಯಾವಾಗಲೂ ಪೀಡಿಸುತ್ತಿತ್ತು. ಅದೇನೆಂದರೆ ಗಂಡಿನ ರೋಗಿಷ್ಠತೆ ಒಂದು ದಿನ ಕೆಲಸಕ್ಕೆ ಹೋದರೆ ನಾಲ್ಕು ದಿನ ಉಳಿ ಅದಕ್ಕಿಂತಲೂ ಹೆಚ್ಚಾಗಿದ್ದ ಮೂಕವೇದನೆ ಎಂದರೆ ಅವನಿಂದ ತನಗೆ ಗಂಡನಿಂದ ಹೆಣ್ಣಿಗೆ ದೊರೆಯಬೇಕಾದ ಸುಖ ಸರಿಯಾಗಿ ದೊರೆಯುತ್ತಿರಲಿಲ್ಲ ಎಂಬುದು" ೯ ಈ ಕಾರಣಕ್ಕಾಗಿ ಅಕ್ಕಣಿ ಚೀಂಕ್ರನೊಂದಿಗೆ ಅನೈತಿಕ ಸಂಬಂಧವನ್ನು ಬೆಳೆಸುತ್ತಾಳೆ. ತನ್ನ ಗಂಡನ ಸಾವಿಗೆ ಚೀಂಕ್ರ ಕಾರಣನೆಂದು ತಿಳಿದಾಗ ಅವನನ್ನು ತಿರಸ್ಕಾರಿಸಲು ಬಯಸುತ್ತಾಳೆ. ಆದರೆ ಚೀಂಕ್ರನ ಒತ್ತಡ ಹೆಚ್ಚಾದಾಗ ಅವನಿಂದ ಬಿಡುಗಡೆಯನ್ನು ಪಡೆಯಲು ಧಣಿ ರಂಗಪ್ಪಗೌಡರ ಹತ್ತಿರ ಸಮಸ್ಯೆಯನ್ನು ಹೇಳಿಕೊಳ್ಳುತ್ತಾಳೆ. ಆದರೆ ಅವಳ ಸ್ಥಿತಿ ಬಾಣಲೆಯಿಂದ ನೇರವಾಗಿ ಬೆಂಕಿಗೆ ಬಿದ್ದಾಂತಾಗುತ್ತದೆ. ರಂಗಪ್ಪಗೌಡರು ಅವಳನ್ನು ಲೈಂಗಿಕವಾಗಿ ಶೋಷಿಸುವ ಪ್ರಸಂಗವನ್ನು ಕಾದಂಬರಿಯಲ್ಲಿ ಕಾರಣಬಹುದು. ಹೀಗೆ ಹಲವು ಕಾರಣಗಳಿಗಾಗಿ ದಲಿತ ಮಹಿಳೆಯರು ತಮ್ಮ ಸಮುದಾಯದಿಂದ ಹಾಗೂ ಮೆಲ್ವರ್ಗದವರ ದೌರ್ಜನ್ಯಗಳಿಗೆ ಒಳಗಾಗಿರುವುದನ್ನು ಕಾಣಬಹುದು.

ಮತ್ತೊಂದು ಪ್ರಕರಣದಲ್ಲಿ ಹಳೆ ಪೈಕದ ಪುಟ್ಟನ ಅತ್ತೆ 'ಕಾಡಿ'ಕದ್ದು ಬಸಿರಾದಾಗ ಅದಕ್ಕಾಗಿ ಜಾತಿಯವರು ನ್ಯಾಯ ಪಂಚಾಯ್ತಿ ನಡೆಸುತ್ತಾರೆ. ಆಗ ಕಾಡಿಯ ಸ್ಥಿತಿಗೆ ಕಾರಣನಾದ ಸೇಸನಾಯ್ಕನು ತನ್ನ ಸಮುದಾಯದ ಹಿರಿಯರಿಗೆ ಚೆನ್ನಾಗಿ ತುಂಡು ಕಡುಬು ಕಳ್ಳುಗಳ ಹಬ್ಬ ಮಾಡಿಸಿ ಅವರನ್ನು ಸಂತೃಪ್ತರಾಗುವಂತೆ ಮಾಡಿ ತನ್ನ ಅಪರಾಧಕ್ಕೆ ಒದಗಬಹುದಾಗಿದ್ದ ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾನೆ. ಕುವೆಂಪು ಕಾದಂಬರಿಗಳಲ್ಲಿ ಕಾಣಬಹುದಾದ ಒಂದು

ವಿಶೇಷತೆ ಎಂದರೆ ಇಲ್ಲಿ ಶೋಷಣೆಗೆ ಒಳಗಾಗುವ ಪಾತ್ರಗಳು ತಮ್ಮ ಜನಾಂಗದಿಂದಲೆ ಶೋಷಣೆಗೆ ಒಳಗಾಗಿರುವುದನ್ನು ಕಾಣಬಹದು. ಲೈಂಗಿಕ ಶೋಷಣೆಯಲ್ಲಿ ಪುರುಷರು ಜಾತಿ ವಿಜಾತಿ ಎನ್ನದೆ ಸಾರ್ವತ್ರಿಕವಾಗಿದೆ.

ಶಿವರಾಮ ಕಾರಂತರ ಚೋಮನ ದುಡಿ ಹಾಗೂ ಕುಡಿಯರ ಕೂಸು ಕಾದಂಬರಿಗಳಲ್ಲಿಯ ದಲಿತ ಸ್ತ್ರೀಯರ ಶೋಷಣೆಯ ನೆಲೆಗಳನ್ನು ಕಾಣಬಹುದು. ಈ ಕಾದಂಬರಿಗಳಲ್ಲಿ ಶೋಷಣೆಗೆ ಒಳಗಾಗುವ ಸ್ತ್ರೀಯರು ದಲಿತರಾದರೆ ಶೋಷಿಸುವುದು ಬಂಡವಾಳಶಾಹಿ ವ್ಯವಸ್ಥೆ. ಚೋಮನ ದುಡಿ ಕಾದಂಬರಿಯಲ್ಲಿ ಬೆಳ್ಳಿ-ಮನ್ವೇಲನ ಸಂಬಂಧವನ್ನು ನೋಡಬಹುದು. ಪ್ರಾರಂಭದಲ್ಲಿ ಬೆಳ್ಳಿಯನ್ನು ಲೈಂಗಿಕವಾಗಿ ಮನ್ವೇಲನು ಬಳಸಿಕೊಳ್ಳುತ್ತಾನೆ. ನಂತರದ ಸ್ವಲ್ಪ ದಿನಗಳಲ್ಲಿ ಬೆಳ್ಳಿ ಈ ಕಾರ್ಯಕ್ಕೆ ಮಾನಸಿಕವಾಗಿ ತಯಾರಾಗುತ್ತಾಳೆ. ತನ್ನ ಈ ಕೆಲಸದಿಂದ ತಂದೆಯ ಸಾಲವು ತೀರುವುದಾದರೆ ಏನಾದರೂ ತ್ಯಾಗ ಮಾಡವ ಮನಃಸ್ಥಿತಿಗೆ ಬೆಳ್ಳಿ ತಯಾರಾಗುತ್ತಾಳೆ. ಆದರೆ ಮನ್ವೇಲನು ಇವಳನ್ನು ತನ್ನ ಹೆಂಡತಿ ಊರಲ್ಲಿ ಇಲ್ಲದಾಗ ಬಳಸಿಕೊಂಡು ತನ್ನ ಮಡದಿ ಹಿಂತಿರುವ ವೇಳೆಗೆ ಬೆಳ್ಳಿಯನ್ನು ನಿರಾಕರಿಸುತ್ತಾನೆ. ಈ ಕಾರಣಕ್ಕಾಗಿ ಅವಳು ದೊರೆ ಮಿಂಗೇಲರ ಕಣ್ಣಿಗೆ ಬೀಳುತ್ತಾಳೆ. ಅಲ್ಲಿಂದ ದೊರೆಯ ಶೋಷಣೆ ಪ್ರಾರಂಭವಾಗುತ್ತದೆ. ಅಂತಿಮವಾಗಿ ಬೆಳ್ಳಿಗೆ ತನ್ನ ವಾಸ್ತವ ಸ್ಥಿತಿಯ ಅರಿವಾಗುತ್ತದೆ. ತಂದೆಯ ಸಾಲ ತೀರಿಸಿದ ಬಳಿಕ ಅವಳು ಅಲ್ಲಿಂದ ತಪ್ಪಿಸಿಕೊಂಡು ಊರಿಗೆ ಹಿಂತಿರುಗುತ್ತಾಳೆ. ಇವಳು ತನ್ನ ತಂದೆಯ ಸಾಲಕ್ಕಾಗಿ ಕಾಮದಾಳಾಗಿ ದುಡಿಯಬೇಕಾಗುತ್ತದೆ. ಇದು ದಲಿತ ಸ್ತ್ರೀಯರು ಬಂಡವಾಳ ಶಾಹಿ ವ್ಯವಸ್ಥೆಯಲ್ಲಿ ಅನುಭವಿಸುತ್ತಿರುವ ನಿರಂತರ ಶೋಷಣೆಯ ಚಿತ್ರವನ್ನು ಬಿಂಬಿಸುತ್ತದೆ.

ಕುಡಿಯರ ಕೂಸು ಕಾದಂಬರಿಯ ಕೆಂಪಿಯ ಪಾತ್ರ ಬೆಳ್ಳಿಯ ಪಾತ್ರಕ್ಕಿಂತ ಭಿನ್ನನೆಲೆಯಲ್ಲಿ ಇದೆ. ಕೆಂಪಿಗೆ ಇಲ್ಲಿ ಯಾವುದೇ ಬಲತ್ಕಾರಗಳು ನಡೆಯುವುದಿಲ್ಲ. ಈಕೆಗೆ ಕುವೆಂಪು ಕಾದಂಬರಿಯಲ್ಲಿನ ಅಕ್ಕಣಿಯ ಮನಃಸ್ಥಿತಿಯನ್ನು ಹೋಲುವ ತಾಯ್ತನದ ತುಡಿತವಿದೆ. ಈ ಕಾರಣಕ್ಕಾಗಿ ತಿರುಮಲ ಭಟ್ಟರ ಆಸೆಯ ಕಣ್ಣುಗಳಿಗೆ ಒಳಗಾಗುತ್ತಾಳೆ. ತಿರುಮಲ ಭಟ್ಟರನ್ನು ಕೆಂಪಿ ಒಲಿಯಲು ಮತ್ತೊಂದು ಕಾರಣವೆಂದರೆ, ಅವರ ಶ್ರೀಮಂತಿಕೆಗೆ ಮರುಳಾಗುತ್ತಾಳೆ. ತಿರುಮಲ ಭಟ್ಟನ ಬೆಳ್ಳಗಿನ ಮೈಬಣ್ಣ, ನಡುವಿಗೆ ಬಿಗಿದ ಚಿನ್ನದ ನೇವಳ ಹಾಗೂ ಕುತ್ತಿಗೆಯಲ್ಲಿ ತೂಗಾಡುತ್ತಿದ್ದ ಚಿನ್ನದ ಸರಗಳಿಗೆ ಕೆಂಪಿ ಮೈಮರೆಯುತ್ತಾಳೆ. ಆತ ತನಗೆ ಕೊಟ್ಟ ಒಂದು ಚಿನ್ನದ ಉಂಗುರದ ಉಡುಗೊರೆಯಿಂದ ಪುಲಕಿತಳಾಗುತ್ತಾಳೆ. ಇಲ್ಲಿ ಲೈಂಗಿಕ ಶೋಷಣೆಗಿಂತ ಪರಸ್ಪರ ಸಹಕಾರದ ಮನೋಭಾವವನ್ನು ಕಾಣಬಹುದಾಗಿದೆ.

ದಲಿತ ಕಾದಂಬರಿಗಳಲ್ಲಿ ಈ ನೆಲೆಯನ್ನು ಭಿನ್ನ ರೂಪದಲ್ಲಿ ಅಂದರೆ ಪ್ರತಿಭಟನೆಯ ರೂಪದಲ್ಲಿ ಕಾಣಬಹುದು. ಮುಳ್ಳೂರು ನಾಗರಾಜರವರ 'ಮರಣಮಂಡಲ ಮಧ್ಯದೊಳಗೆ' ಕಾದಂಬರಿಯಲ್ಲಿ ಗೌಡರ ಮಗ ಚಂದ್ರ ಹಾಗು ಹೊಲಾರ ಸಿದ್ದಿಯ ಅನ್ಯೆತಿಕ ಸಂಬಂಧದ ಚಿತ್ರಣವಿದೆ. ಈ ಸಂಬಂಧದ ಬಗ್ಗೆ ತಿಳಿದಾಗ ಕಾದಂಬರಿಯ ಬಸವರಾಜು ತೀವ್ರವಾಗಿ ಇದನ್ನು ವಿರೋಧಿಸುತ್ತಾನೆ. ಅವರನ್ನು ಹುಣಿಸೆ ಬರಲಿನಿಂದ ಥಳಿಸುತ್ತಾನೆ. ಹೀಗೆ ಥಳಿಸಲು ಬಸವರಾಜುವಿಗೆ ತನ್ನ ಜಾತಿಯ ಹೆಣ್ಣು ನಿರಂತವಾಗಿ ಶೋಷಣೆಗೆ ಒಳಗಾಗಿರುವ ಐತಿಹಾಸಿಕ ಅರಿವು ಕಾರಣವಾಗಿದೆ. ಇವರ ಮದುವೆಯನ್ನು ಗೌಡರು ವಿರೋಧಿಸುವುದು ಕೆಳಗಿನ ಕಾರಣಗಳಿಗಾಗಿ " ಹೆಂಗ್ಸು ಯಾವ ಜಾತಿಯವಳಾದ್ರು ಆಗಿರ್ಲಿ. ಅವಳ ಇಟ್ಕಳಕ ಮಾಡಕ ಯಾವ ಸೂತಕವು ಇಲ್ಲ. ಎಷ್ಟಾದ್ರೂ ಮೂರ್‍ಕಾಸಿನೆಂಗ್ಸಲ್ವ ? ಆದ್ರ ತಾಳಿ ಕಟ್ಬೇಕಾರ ಜೊತೆಲಿ ಬದುಕ್ಬೇಕಾರ ಅವಳು ನಮ್ಮ ಜಾತಿಯವ್ಳೆ ಆಗಿರ್‍ಬೇಕು. ಸಾಸ್ತ್ರ ಸಂಬಂಧಾದಿಗಳು ಸರಿ ಬರ್‍ಬೇಕು" ( ಮುಳ್ಳೂರು ನಾಗರಾಜ : ೧೯೮೬ : ೪೭) ಎಂಬ ಗೌಡರ ಹೇಳಿಕೆಯಲ್ಲಿ ಅವರು ಸ್ತ್ರೀಯರ ಬಗ್ಗೆ ಹೊಂದಿರುವ ಅಭಿಪ್ರಾಯವನ್ನು

ಗಮನಿಸಬಹುದು. ಇವರ ದೃಷ್ಟಿಯಲ್ಲಿ ಮಹಿಳೆಯರೆಂದರೆ ಕೇವಲ ಬೋಗದ ವಸ್ತು ಮಾತ್ರ. ಇದು ಮೇಲ್ವರ್ಗದವರ ದಲಿತ ಸ್ತ್ರೀಯ ಶೋಷಣೆಯಾದರೆ ದಲಿತ ಪುರುಷರು ಪ್ರತೀಕಾರಕ್ಕಾಗಿ ಸವರ್ಣೀಯ ಮಹಿಳೆಯರನ್ನು ಅಮಾನವೀಯವಾಗಿ ಹಿಂಸಿಸುವ ಘಟನೆಗಳು ದಲಿತ ಕಾದಂಬರಿಗಳಲ್ಲಿ ಉಲ್ಲೇಖಗೊಂಡಿವೆ.

ದಲಿತ ಜಾತಿಯ ಹೆಣ್ಣುಗಳ ಮೇಲೆ ಶತಮಾನಗಳಿಂದ ನಡೆದ ಲೈಂಗಿಕ ಶೋಷಣೆಯ ವಿರುದ್ಧ ಪ್ರತೀಕಾರ ತಿರಿಸಿಕೊಳ್ಳಲು ಮೇಲ್ವರ್ಗದ ಸ್ತ್ರೀಯರನ್ನು ಲೈಂಗಿಕವಾಗಿ ಹಿಂಸಿಸುವ ಪ್ರಸಂಗ ಮುಳ್ಳೂರು ನಾಗರಾಜರವರ ಕಾದಂಬರಿಯಲ್ಲಿ ಕಾಣಬಹುದು. ಸವರ್ಣೀಯ ಮಹಿಳೆಯೊಬ್ಬಳು ತಾನು ನಡೆಸುತ್ತಿದ್ದ ಹೋಟೆಲ್‌ಗೆ ದಲಿತರಿಗೆ ಪ್ರವೇಶ ನೀಡಲಿಲ್ಲ ಎಂಬ ಕಾರಣಕ್ಕಾಗಿ ಅವಳ ಮೇಲೆ ದಲಿತ ಯುವಕರು ಆತ್ಯಾಚಾರ ನಡೆಸುತ್ತಾರೆ. ಹಾಗೆಯೇ ಪಟೇಲರ ಮಗ ನಿಂಗಪ್ಪ ದಲಿತರ ಕೆಂಚಮ್ಮನನ್ನು ಕೆಣಕಿದನೆಂಬ ಕಾರಣಕ್ಕೆ ಬಸವರಾಜು ನಿಂಗಪ್ಪ ಎದುರಿನಲ್ಲಿಯೇ ಅವನ ಹೆಂಡತಿಯ ಮೇಲೆ ಆತ್ಯಾಚಾರ ನಡೆಸುತ್ತಾನೆ. ಈ ಬಗೆಯ ಶೋಷಣೆಗಳನ್ನು ದಲಿತ ಕಾದಂಬರಿಗಳಲ್ಲಿ ಕಾಣಬಹುದು. ಇಂತಹ ಕೃತ್ಯಗಳನ್ನು ಪುರುಷರು ಯಾವ ವರ್ಗದ ಹೆಣ್ಣಿನ ಮೇಲೆ ನಡೆಸಿದರು ಅದು ಖಂಡನಾರ್ಹವಾಗುತ್ತದೆ. ಸಮಾಜದ ದಲಿತರು ಮತ್ತು ಸವರ್ಣೀಯರ ದ್ವೇಷಕ್ಕೆ ಅಮಾಯಕ ಮಹಿಳೆಯರು ಬಲಿಯಾಗುವುದು ವಿಪರ್ಯಾಸ.

ಕುಸುಮಬಾಲೆಯಲ್ಲಿ ತೂರಮ್ಮ ತನ್ನ ಮಗಳು ಕೆಂಪಿಯು ಅನೈತಿಕ ಸಂಬಂಧದಿಂದ ಬಸಿರಾಗಿರುವುದನ್ನು ಸಹಿಸದ ತೂರಮ್ಮ ತನ್ನ ಮಗಳಿಗೆ ಹೀಗೆ ಶಿಕ್ಷೆ ವಿಧಿಸುತ್ತಾಳೆ. " ಎಡಗೈಲಿ ಮಗಳ ಮುಂದಲ್ವ ಹಿಡ್ಕಂಡೂ ಬಲಗೈಲಿ ಈಚಲ ಇಡಗಲು ಹಿಡ್ಕಂಡು, ಬಗ್ಗಿದ್ದ ಬೆನ್ನ ಇನ್ನು ಬಗ್ಗಿಸಿ, ಕಪ್ಪು ಹಚ್ಚಿದ್ದ ಕಟ್ಟು ಹಲ್ಲೂನ ನೊರಗುಟ್ಸಿ 'ಯಾನಮ್ಮಿ ಯಾನ ಇದು ನಿನ್ ಮಾಯಾ ಮಂಗಾಟ ? ಚಾಲು ಚಲಾಕು ?..... ಅಂತ ಗುದ್ದಿದಳು.........ಯಾರ್ ಮುಂಧ್ಯ ಆಡ್ತಾ ಇರೋದು ನೀನೂ ? ಅದೇನ್ ನಿನ್ ಹೊಟ್ಟ ಒಳ್ಗ ಮಡಿಕ್ಕಂಡಿದ್ದೀಯೋ ಅದ ಕಕ್ಕು ಅದಾ' ಎಂದಳು".[೧೦] ಇಲ್ಲಿ ತನ್ನ ಮಗಳು ಅನೈತಿಕ ಸಂಬಂಧದಿಂದ ಬಸಿರಾಗಿರುವುದನ್ನು ತೂರಮ್ಮ ಖಂಡಿಸುತ್ತಿದ್ದಾಳೆ. ಕೆಂಪಿಯ ಬಗ್ಗೆ ತೂರಮ್ಮನಿಗೆ ಅಸಮದಾನವಿದೆ. ಆಕೆ ತಾಯ್ತನದ ಹಂಬಲಕ್ಕಾಗಿ ಈ ಕೆಲಸವನ್ನು ಮಾಡಿದ್ದಾಗಿ ತಿಳಿಸಿದಾಗ ಕೆಂಪಿಯ ಅಕ್ಷಮ್ಯ ಅಪರಾಧವೂ ಕ್ಷಮ್ಯವೆನಿಸಿಬಿಡುತ್ತದೆ. ಇದೇ ಕಾದಂಬರಿಯು ಮತ್ತೊಂದು ನೆಲೆಯ ಚಿತ್ರಣವನ್ನು ನೀಡುತ್ತದೆ. ಹೊಲೆಯರ 'ಚನ್ನ' ಮತ್ತು ಸವರ್ಣೀಯರ 'ಕುಸುಮ' ಇವರ ನಡುವೆ ಮೋಹವೇರ್ಪಟ್ಟಿದೆ. ಇದನ್ನು ಸಹಿಸದ ಸವರ್ಣೀಯರು ದಲಿತರ ಚನ್ನನನ್ನು ಕೊಲೆಮಾಡಿದ್ದಾರೆ. ಚನ್ನ ಕೊಲೆಯಾಗಿರುವ ವಿಷಯ ದಲಿತ ಕೇರಿಯವರಿಗೆ ಗೊತ್ತಿಲ್ಲ. ಚನ್ನ ಮತ್ತು ಕುಸುಮರ ಪ್ರೇಮವನ್ನು ಕುಸುಮಾಳಿಗೆ ಹುಟ್ಟಿದ ಕೂಸು ಬಯಲು ಮಾಡುತ್ತದೆ. ಇಂತಹ ಅನೇಕ ಪ್ರಸಂಗಗಳು ದಲಿತ ಕಾದಂಬರಿಯಲ್ಲಿ ಪ್ರಕಟವಾಗಿವೆ.

ಶತಮಾನಗಳಿಂದ ತಮ್ಮ ಜನಾಂಗದ ಸ್ತ್ರೀಯರ ಮೇಲೆ ನಿರಂತರವಾಗಿ ನಡೆಯುತ್ತಿರುವ ಶೋಷಣೆಯನ್ನು ಕುರಿತಾದ ಅರಿವು ದಲಿತ ಸಮುದಾಯದ ವಿದ್ಯಾವಂತರಲ್ಲಿ ಗಾಢವಾಗಿದೆ. ಆದರೆ ಇಂತಹ ಶೋಷಣೆಯ ವಿರುದ್ಧ ಸ್ಪಷ್ಟವಾದ ಪ್ರತಿರೋಧ ವ್ಯಕ್ತವಾಗುವುದಿಲ್ಲ. ಭೂಮಾಲಿಕವರ್ಗ, ಬಂಡವಾಳಶಾಹಿ ವರ್ಗದಿಂದ ಮುಖ್ಯವಾಗಿ ದಲಿತ ಮಹಿಳೆಯರ ಶೋಷಣೆಗಳು ಹೆಚ್ಚಾಗಿ ನಡೆದಿವೆ. ಕುವೆಂಪು, ಕಾರಂತ ಹಾಗೂ ದೇವನೂರ ಮಹದೇವರ ಕಾದಂಬರಿಯಲ್ಲಿ ಹೆಣ್ಣಿನ ಹಲವು ಹಂಬಲಗಳ ಕಾರಣವಾಗಿ ಲೈಂಗಿಕ ಶೋಷಣೆಗಳು ನಡೆಯುತ್ತವೆ ಎಂಬ ಅಂಶವನ್ನು ಮೇಲಿನ ಅಧ್ಯಯನದಿಂದ ತಿಳಿದುಕೊಳ್ಳಬಹುದು.

**೪. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಜೀತ ಪದ್ಧತಿಯ ಅಮಾನವೀಯ ವರ್ತನೆಗಳು:** ನವೋದಯದ

ಸಂದರ್ಭದಲ್ಲಿ ರಚಿತವಾದ ಹಲವು ಕಾದಂಬರಿಗಳು ಜೀತ ಪದ್ಧತಿಯ ಕರಾಳ ಮುಖಗಳನ್ನು ಪರಿಚಯಿಸುತ್ತವೆ. ಕುವೆಂಪು ಕಾರಂತರ ಕಾದಂಬರಿಗಳು ಈ ಸಮಸ್ಯೆಯನ್ನು ಮುಖ್ಯವಾಗಿ ಹೊಂದಿವೆ. ಈ ಸಂದರ್ಭದಲ್ಲಿ ಜೀತ ಪದ್ಧತಿಯ ಆಚರಣೆ ತುಂಬಾ ಅಮಾನವೀಯವಾಗಿದ್ದುದನ್ನು ಕಾದಂಬರಿಗಳು ಚಿತ್ರಿಸಿವೆ.

ಬ್ರಾಹ್ಮರು, ಲಿಂಗಾಯತರು, ಒಕ್ಕಲಿಗರುಗಳು ಅಂದಿನ ಸಂದರ್ಭದಲ್ಲಿ ಹೆಚ್ಚಾಗಿ ಭೂಮಿಯನ್ನು ಹೊಂದಿದರು. ಅಸ್ಪೃಶ್ಯ ವರ್ಗಕ್ಕೆ ಸೇರಿದ ಇತರ ಜನಾಂಗದವರು ಇವರಲ್ಲಿ ಜೀತಕ್ಕಿದ್ದರು. ಭೂಮಾಲಿಕರ ಹಾಗೂ ಕೆಲಸಗಾರರ ನಡುವಿನ ಸಂಬಂಧವನ್ನು ಜೀತಪದ್ಧತಿ ನಿಯಂತ್ರಿಸುತಿತ್ತು. ಕೂಲಿಕಾರ ತನ್ನ ಭೂಮಾಲಿಕನಿಂದ ಪಡೆದ ಸಾಲಕ್ಕಾಗಿ ಅವನು, ಅವನ ಮಕ್ಕಳು ವಂಶಪರಂಪರ್ಯವಾಗಿ ದುಡಿಯುವುದೇ ಜೀತಪದ್ದತಿ. ಸಾಲ ಕೊಡುವ ಭೂಮಾಲಿಕ ಸಾಲ ಕೊಡುವಾಗ ಕೂಲಿಯಾಳುಗಳಿಗೆ ಕೆಲವೊಂದು ಷರತ್ತುಗಳನ್ನು ವಿಧಿಸುತ್ತಾನೆ. ಆ ನಿಯಮಗಳ ಪ್ರಕಾರ ಸಾಲ ಪಡೆದ ಅಶ್ಪೃಶ್ಯ ಅಥವಾ ದಲಿತ ಕುಟುಂಬದವರು ನಿರ್ದಿಷ್ಟ ಸಮಯದ ಕೂಲಿಗಿಂತ ಹೆಚ್ಚಾಗಿ ಭೂಮಾಲಿಕನ ಜಮೀನಿನಲ್ಲಿ ದುಡಿಯಬೇಕಾಗುತ್ತದೆ. ಹಾಗೆಯೇ ಹಲವು ಕೆಲಸಗಳನ್ನು ಬಿಟ್ಟಿಯಾಗಿ ಭೂಮಾಲಿಕನಿಗೆ ಮಾಡಿಕೊಡಬೇಕಾಗುತ್ತದೆ.

ಜೀತಪದ್ಧತಿಗೆ ಒಳಗಾದ ವ್ಯಕ್ತಿಯ ಸಂಪಾದನೆ ಎಂದರೆ ಯಜಮಾನ ಕೊಡುವ ಅಡಿಕೆಯ ಚೂರುಗಳು, ವೀಳೆಯದ ಎಲೆ, ಒಂದು ತುಂಡು ಹೊಗೆಸೊಪ್ಪು, ಸ್ವಲ್ಪ ಅಕ್ಕಿ ಇವೆ ಜೀತದಾಳುವಿನ ದುಡಿಮೆಗೆ ದೊರೆಯುತ್ತಿದ್ದ ಪ್ರತಿಫಲ ಇದನ್ನು 'ಪಡಿ'ಯೆಂದು ಕರೆಯಲಾಗುತ್ತದೆ. ಚೋಮನ ದುಡಿ ಕಾದಂಬರಿಯಲ್ಲಿ ಚೋಮ ಸಂಕಪ್ಪಯ್ಯನ ವಿರುದ್ದ ಮಾತಾನಾಡುತ್ತಾನೆ. ಆದರೂ ಅವನ ಧಣಿ ಅವನನ್ನು ಕ್ಷಮಿಸಿ ಬೆಳ್ಳಿಗೆ ಚೋಮನ ಪಾಲಿನ ಪಡಿ ತೆಗೆದುಕೊಂಡು ಹೋಗುವಂತೆ ತಿಳಿಸುತ್ತಾನೆ. ಚೋಮ ಸಂಕಪ್ಪಯ್ಯನ ಜಮೀನಿನಲ್ಲಿ ದುಡಿಯದಿದ್ದರು ಅವನ ಭಾಗದ ಪಡಿಯನ್ನು ಗೌಡರು ನೀಡುತ್ತಾರೆ. "ಅವನ ಹತ್ತಿರ ಕೆಲಸ ಗಿಲಸ ಹೇಳಿ ಉಪಯೋಗವಿಲ್ಲ. ಅವನಿಗೆ ಬುದ್ಧಿ ಸ್ವಾದೀನ ಇರುವ ಹಾಗಿಲ್ಲ. ಅಂತು ಅವನಿಗೆ ತೋರಿದಂತೆ ಮಾಡಲಿ ನೀನು ನಿತ್ಯ ಬಂದು ಅವನ ಪಡಿಯನ್ನು ತೆಗೆದುಕೊಂಡುಹೋಗು" ( ಶಿವರಾಮ ಕಾರಂತ : ೧೯೩೩ : ೭೬) ಎನ್ನುತ್ತಾರೆ. ಇಲ್ಲಿ ಸಂಕಪ್ಪಯ್ಯನವರ ಮಾನವೀಯ ನೆಲೆಯನ್ನು ಕಾಣಬಹುದು. ಅಂದಿನ ಸಂಧರ್ಬದಲ್ಲಿ ದಲಿತರು ಭೂಮಿಗೆ ಒಡೆಯರಾಗುವುದು ಹಿಂದೂ ಸಂಪ್ರದಾಯಕ್ಕೆ ವಿರುದ್ದವಾಗಿತ್ತು. ಈ ಕಾರಣಕ್ಕಾಗಿ ಸಂಕಪ್ಪಯ್ಯನ ತಾಯಿ ಚೋಮನಿಗೆ ಭೂಮಿ ನೀಡಲು ನಿರಾಕರಿಸುತ್ತಾಳೆ.

ಒಬ್ಬ ಭೂಮಾಲಿಕನಿಂದ ಕೆಲಸಗಾರ ಸಾಲ ಪಡೆದ ಮೇಲೆ ಅವನು ಭೂಮಾಲಿಕನ ಆಸ್ತಿ ಆತ ಪ್ರತಿದಿನ ಸಾಲ ಪಡೆದವನ ಜಮೀನಿನಲ್ಲಿ ದುಡಿಯಬೇಕು. ಬೇರೆ ಭೂಮಾಲಿಕರ ಹತ್ತಿರ ಕೆಲಸಕ್ಕೆ ಹೋಗುವಂತಿರಲ್ಲ. ಎಷ್ಟೊ ಕೂಲಿಕಾರ್ಮಿಕರು ತಾವು ಮಾಡಿದ ಸಾಲವನ್ನು ತೀರಿಸಲಾಗದೆ ತಮ್ಮನ್ನು ಜೀತದಾಳುಗಳಾಗಿ ಮಾರಿಕೊಳ್ಳುತ್ತಾರೆ. ಈ ಚಿತ್ರಣವನ್ನು ಶಿವರಾಮ ಕಾರಂತರು ಚೋಮನ ದುಡಿ ಕಾದಂಬರಿಯಲ್ಲಿ ನೋಡಬಹುದು. ಚೋಮನ ಕುಟುಂಬ ದಿನವಿಡಿ ಸಂಕಪ್ಪಯ್ಯನ ಜಮೀನಿನಲ್ಲಿ ದುಡಿದರೆ ಅವನಿಗೆ ಸಿಗುತಿದ್ದದು ಎರಡು ಪಾವು ಅಕ್ಕಿ, ಐದು ಪಾವು ಭತ್ತ ಮಾತ್ರ, ಈ ಧಾನ್ಯದಲ್ಲಿಯೇ ಚೋಮನ ಆರು ಜನ ಸದಸ್ಯರು ಬದುಕಬೇಕಾಗಿತ್ತು. ಈ ಕಾರಣಕ್ಕಾಗಿ ಚೋಮ ಭೂಮಿಗಾಗಿ ಆಸೆ ಪಡುತ್ತಾನೆ. ಜೀವನ ನಿರ್ವಹಣೆಗೆ ಸಾಕಾಗುಷ್ಟು ಆಹಾರ ಧಾನ್ಯಗಳು ಇಲ್ಲದೇ ಇರುವುದರಿಂದ ತಾನು ಸ್ವತಃ ಬೇಸಾಯ ಮಾಡಿ ಸ್ವಾವಲಂಬಿಯಾಗಿ ಬದುಕುವ ಆಶಯವನ್ನು ಹೊಂದಿದ್ದಾನೆ. ಆದರೆ ಅಂತಿಮವಾಗಿ ಅತನ ಆಸೆ ಈಡೇರಾದೆ ನಿರಾಶನಾಗಿ ಸಾಯುತ್ತಾನೆ.

**'ಕುಡಿಯರ ಕೂಸು'** ಕಾದಂಬರಿಯ ಕುಡಿಯರು ಕಾಡಿಗೆ ಅಧಿಪತಿಗಳಾಗಿದ್ದವರು. ಆಧುನಿಕತೆಯ ಪ್ರವೇಶದಿಂದಾಗಿ

ಅವರು ಜೀವಿಸುತ್ತಿದ್ದ ಕಾಡು ಏಲಕ್ಕಿ, ಕಾಫಿ, ಟೀ ತೋಟಗಳಾಗಿ ಮಾರ್ಪಾಟಾಗಿವೆ. ಭೂಮಾಲಿಕರ ಆಗಮನದಿಂದಾಗಿ ಕುಡಿಯರು ತಮ್ಮ ಮೂಲ ನೆಲೆಯನ್ನು ಕಳೆದುಕೊಂಡು ತಬ್ಬಲಿಗಳಾಗಿದ್ದಾರೆ. ಎಲ್ಲಿಂದಲೋ ಬಂದು ಇಡೀ ಕಾಡಿಗೆ ಕೃಷಿ ವಿಸ್ತರಿಸಿದ ಭೂಮಾಲಿಕರಿಗೆ ಕುಡಿಯರು ಅನಿವಾರ್ಯವಾಗಿ ಜೀತದಾಳುಗಳಾಗುತ್ತಾರೆ.

ಕುವೆಂಪು ಅವರ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳು ಉಳಿಗಮಾನ್ಯ ವ್ಯವಸ್ಥೆಯು ಜೀತದಾಳುಗಳನ್ನು ನಡೆಸಿಕೊಳ್ಳುವ ರೀತಿಯನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಜೀತದಾಳುಗಳ ವಿಚಾರವಾಗಿ ಒಕ್ಕಲಿಗ ಸಮುದಾಯಗಳಲ್ಲಿ ಹಲವಾರು ಮನಸ್ತಾಪಗಳು ಉಂಟಾಗಿರುವುದನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಹಾಗೆಯೇ ಜೀತದಾಳುಗಳ ವಿಚಾರವಾಗಿ ವಿದ್ಯಾವಂತ ಯುವಕರು ಕೂಲಿಕಾರ್ಮಿಕರ ಪರವಾಗಿರುವ ಚಿತ್ರಣಗಳನ್ನು ತಮ್ಮ ಕಾದಂಬರಿಗಳಲ್ಲಿ ದಾಖಲಿಸಿದ್ದಾರೆ. ಇವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಆಳುಗಳ ವಿಚಾರಕ್ಕಾಗಿಯೇ ಹಿಂದಿನಿಂದಲೂ ಸಿಂಬಾವಿ ಹೆಗ್ಗಡೆಯವರಿಗೂ ಬೆಟ್ಟಳ್ಳಿ ಗೌಡರಿಗೂ ಒಂದು ಸ್ಪರ್ಧಾ ಮನೋಭಾವ ಬೆಳೆದು ಅದು ಮನಸ್ತಾಪಕ್ಕೂ, ಜಗಳಕ್ಕೂ ಕಾರಣವಾದ ಘಟನೆಯೊಂದನ್ನು ಕುವೆಂಪುರವರು ಹೀಗೆ ವಿವರಿಸಿದ್ದಾರೆ. "........ ಕರಿಸಿದ್ದಗೆ ಬೆಟ್ಟಳ್ಳಿ ಕೇರಿಯ ದೊಡ್ಡ ಬೀರನ ತಂಗಿ ಗಿಡ್ಡಿಯನ್ನು ತಂದಾಗಲೆ ಬೆಟ್ಟಳ್ಳಿ ಕಲ್ಲಯ್ಯಗೌಡರಿಗೂ ಭರಮೈ ಹೆಗ್ಗಡೆಯ ತಂದೆ ಸಿಂಬಾವಿಯ ದಿವಂಗತ ದುಗ್ಗಣ್ಣ ಹೆಗ್ಗಡೆಯವರಿಗೂ ಹೊಡೆದಾಟವಾಗುವುದರಲ್ಲಿತ್ತಂತೆ. ....ಆಗ ಕಲ್ಲೂರ ಸಾವುಕಾರ ಮಂಜ ಭಟ್ಟರ ಮಧ್ಯಸ್ಥಿಕೆಯಲ್ಲಿ ಪಂಚಾಯಿತಿ ನಡೆದು ಸಿಂಬಾವಿ ಕೇರಿಯ ಗುತ್ತಿಯ ಅಪ್ಪ ಕರಿಸಿದ್ದನ ತಂಗಿ ಸೇಸಿಯನ್ನು ಬೆಟ್ಟಳ್ಳಿ ಕೇರಿಯ ತಿಮ್ಮಿಯ ಅಪ್ಪ ದೊಡ್ಡಬೀರನಿಗೆ ಮದುವೆ ಮಾಡಿಸಿ, ಆಳಿಗೆ ಆಳು ಬದಲು ಬಂದು ತುಂಬಿಕೊಳ್ಳುವಂತೆ ಮಾಡಿ. ಎರಡು ಮನೆತನಗಳಿಗೂ ರಾಜಿ ಮಾಡಿಸಿದ್ದರಂತೆ. ಎರಡು ಮನೆತನಗಳಿಗೂ ಅಂತಹ ಜಗಳಗಳೂ, ಅಂತಹ ರಾಜಿಗಳೂ ಅನೇಕ ಸಾರಿ ಅನೇಕ ಕಾರಣಗಳಿಗಾಗಿ ನಡೆದಿದ್ದುವು."೧೧ ಇಲ್ಲಿ ಎರಡು ಒಕ್ಕಲಿಗ ಮನೆತನಗಳಲ್ಲಿ ಕೂಲಿ ಆಳುಗಳಿಗಾಗಿ ಉಂಟಾದ ವೈಮನಸ್ಯವನ್ನು ಕುವೆಂಪುರವರು ದಾಖಲಿಸಿದ್ದಾರೆ. ಇದೇ ರೀತಿ ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಚಂದ್ರೇಗೌಡರು ಹೂವಯ್ಯನಿಗೆ ಪಾಲು ಕೊಡುವಾಗ ಆಳುಗಳನ್ನು ವಸ್ತುಗಳಂತೆ ಹಂಚಿಕೊಳ್ಳುವ ಪ್ರಸಂಗ ದಾಖಲಾಗಿದೆ. ಇಲ್ಲಿ ಚಂದ್ರೇಗೌಡರು ಬಲಿಷ್ಠ ಆಳುಗಳನ್ನು ತಮ್ಮ ಪಾಲಿಗೆ ತೆಗೆದುಕೊಳ್ಳುವುದನ್ನು ನೋಡಬಹುದು. ಧಣಿ ಜೀತಗಾರರ ನಡುವೆ ಇಲ್ಲಿ ಭಾವನಾತ್ಮಕ ಸಂಬಂಧಗಳು ಏರ್ಪಡುವುದಿಲ್ಲ. ತಾವು ಯಾರ ಕಡೆಗೆ ಹೋಗಬೇಕು ಎಂಬ ಆಯ್ಕೆಯ ಸ್ವಾತಂತ್ರ್ಯ ಜೀತಗಾರರಿಗೆ ಇಲ್ಲದಿರುವುದನ್ನು ಮೇಲಿನ ಹೇಳಿಕೆ ತಿಳಿಸುತ್ತದೆ. ಹಾಗೆಯೇ ಮದುವೆ ಮುಂತಾದ ವೈಯಕ್ತಿಕ ವಿಚಾರಗಳಲ್ಲಿ ಜೀತಗಾರರ ಮುಕ್ತ ತೀರ್ಮಾನಗಳಿಗೆ ಉಳಿಗಮಾನ್ಯ ವ್ಯವಸ್ಥೆಯಲ್ಲಿ ಸ್ವಾತಂತ್ರ್ಯ ಇಲ್ಲದಿರುವುದನ್ನು ಕಾಣಬಹುದು.

ಭರಮೈ ಹೆಗಡೆ ಮತ್ತು ಜೀತಗಾರ ಗುತ್ತಿಯ ನಡುವಿನ ಸಂಬಂಧ ಇದೆ ತರಹದ್ದು ಜೀತಗಾರರ ಖಾಸಗಿ ಬದುಕು ಮತ್ತು ಭಾವನೆಗಳನ್ನು ಈ ಭೂಮಾಲಿಕರು ನಿಯಂತ್ರಿಸುತ್ತಿರುತ್ತಾರೆ. ಗುತ್ತಿ ತಿಮ್ಮಿಯನ್ನು ಹರಿಸಿಕೊಂಡು ಬಂದು ತಮ್ಮ ಧಣಿ ಭರಮೈ ಹೆಗ್ಗಡೆಯವರಲ್ಲಿ ತನ್ನ ಮದುವೆಗಾಗಿ ಸಾಲ ಕೇಳುತ್ತಾನೆ. ಈ ಸಂದರ್ಭವನ್ನು ಕುವೆಂಪುರವರು ಹೀಗೆ ಚಿತ್ರಿಸಿದ್ದಾರೆ. "........... ಭರಮೈ ಹೆಗ್ಗಡೆ ಕೈಯಲ್ಲಿ ಹಿಡಿದಿದ್ದ ಲೆಕ್ಕದ ಪುಸ್ತಕವನ್ನು ದೂರನೂಕಿ, ತಾಟಸ್ಥ್ಯವನ್ನೆಲ್ಲ ಅಚೆಗೆ ತಳ್ಳಿ 'ನಿನಗೇನು ಸೊಕ್ಕೆನೋ? ತಲೆಗಿಲೆ ಕೆಟ್ಟಿದೆಯೋ? ಅವರ ಸಾಲನೆಲ್ಲ ತೀರಿಸಿ, ಅವಳಿಗೆ ಅಷ್ಟೊಂದು ತೆರಾಕೊಟ್ಟು, ನಾ ನಿನಗೆ ಮದೇ ಮಾಡ್ಸಿ, ನನ್ನ ಮನೆ ಹಾಳುಮಾಡಿಕೊಳ್ಳಲೆನೋ? ನಿನಗೆ, ನಿನ್ನ ಅಪ್ಪಗೆ, ಕೊಟ್ಟ ಸಾಲಾನೇ ಕುತ್ತರೆ ಬೆಳೆದ್ಹಾಂಗೆ ಬೆಳೆದು ನಿಂತದೆ! ಅದನ್ನೆ ನೀವು ತೀರಿಸಾದು ಯಾವಾಗಲೋ ?....... ಹೇಳ್ತೀನಿ ನೋಡು. ನಿಂಗೆ ಅವಳನ್ನೇ ಮದೇ ಮಾಡಿಕೊಳ್ಳಲೇಬೇಕು ಅಂತಾ ಅಷ್ಟೊಂದು ತೆವಲು ಹತ್ತಿದ್ರೆ, ಬೆಟ್ಟಳ್ಳಿ ಗೌಡ್ರಿಂದಲೆ ಸಾಲಾತಗೊಂಡು, ನನ್ನ ಸಾಲಾನೆಲ್ಲ ತೀರ್ಸಿ, ಅವರ ಕೇರಿಗೇ ಹೋಗಿ ಅವಳನ್ನೆ ಮದೇ ಮಾಡಿಕೊಂಡು ಸುಕಾಗಿರು!

ಯಾರು ಬ್ಯಾಡ ಅಂತಾರೆ!".೧೨ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜೀತಗಾರಿಗೆ ಭೂಮಾಲಿಕರಿಂದ ಕೇಳಿದ ತಕ್ಷಣ ಅವರಿಗೆ ಹಣ ಸಿಗುತ್ತಿರಲಿಲ್ಲ. ಪ್ರತಿಯೊಂದು ಶುಭ ಅಥವಾ ಕೆಟ್ಟ ಕಾರ್ಯಗಳಿಗೆ ಇವರು ಹಣಕ್ಕಾಗಿ ಭೂಮಾಲಿಕರನ್ನೇ ಅವಲಂಭಿಸಿದ್ದರು. ಅಂದಿನ ಸಂದರ್ಭದ ಭೂಮಾಲಿಕರು ಜೀತದವರನ್ನು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಶೋಷಣೆಗೆ ಗುರಿಪಡಿಸುತ್ತಿದ್ದರು. ತಮ್ಮ ಖಾಸಗಿ ಬದುಕಿನ ಆಸೆಗಳನ್ನು ಈಡೇರಿಸಿಕೊಳ್ಳಲು ಜೀತಗಾರರು ಧಣಿಗಳ ಅಭಿಪ್ರಾಯಕ್ಕೆ ಮನ್ನಣೆ ನೀಡಲೇಬೇಕಾಗುತಿತ್ತು.

ಇಂತಹ ಉಳಿಗಮಾನ್ಯ ವ್ಯವಸ್ಥೆಯ ಕ್ರೂರ ಪದ್ಧತಿಗಳನ್ನು ಅವರ ಶೋಷಣೆಯ ಪರಿಯನ್ನು ಕುವೆಂಪುರವರು ಆ ವ್ಯವಸ್ಥೆಯ ಒಳಗೆ ಜೀವಿಸಿ ಅವರ ಶೋಷಣೆಯ ವಿವಿಧ ಮುಖಗಳನ್ನು ಓದುಗರಿಗೆ ಪರಿಚಯಿಸಿದ್ದಾರೆ. ಈ ವ್ಯವಸ್ಥೆಯನ್ನು ಬದಲಾಯಿಸುವ ಮಹತ್ವಾಕಾಂಕ್ಷೆಯನ್ನು ಕುವೆಂಪುರವರು ಹೊಂದಿದ್ದರು. ಈ ಕಾರಣಕ್ಕಾಗಿ ತಮ್ಮ ಕಾದಂಬರಿಗಳಲ್ಲಿ ಸುಧಾರಣಾವಾದಿ ಮನೋಭಾವವುಳ್ಳ ಅನೇಕ ಪಾತ್ರಗಳನ್ನು ತಮ್ಮ ಕಾದಂಬರಿಯಲ್ಲಿ ದಾಖಲಿಸಿದ್ದಾರೆ. ಕಾನೂರು ಹೆಗ್ಗಡತಿಯ ಹೂವಯ್ಯನ ಪಾತ್ರ ಜೀತಗಾರರ ಹಾಗೂ ಭೂಮಾಲಿಕರ ನಡುವಿನ ಮಾನವೀಯ ಸಂಬಂಧಗಳನ್ನು ವೃದ್ಧಿಸುತ್ತದೆ. ಈತ ದಲಿತರಿಗೆ ಶಿಕ್ಷಣದ ಅವಶ್ಯಕತೆಯನ್ನು ಮನಗಾಣುತ್ತಾನೆ. ಸೀತೆ ಹಲವು ದಲಿತ ಮಕ್ಕಳಿಗೆ ಅಕ್ಷರ ಕಲಿಸುವ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ಹೂವಯ್ಯ ದಲಿತ ಕೇರಿಗಳಿಗೆ ಅವರ 'ಪಡಿ'ಯನ್ನು ಸ್ವತಃ ತಾನೇ ತಲುಪಿಸುತ್ತಾನೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮುಕುಂದಯ್ಯ ಐತ ಪಿಂಚಲು ಇವರನ್ನು ಜೀತಗಾರರು ಎಂದು ಪರಿಗಣಿಸದೆ ಇವರ ನಡುವೆ ಮಾನವೀಯ ಅಂತಃಕರಣವನ್ನು ಹೊಂದಿರುವುದನ್ನು ಕಾಣಬಹುದು. ಹೀಗೆ ಕುವೆಂಪುರವರು ತಮ್ಮ ಕಾದಂಬರಿಗಳ ಮೂಲಕ ಉಳಿಗಮಾನ್ಯ ವ್ಯವಸ್ಥೆಯ ಸಾಧಕ-ಬಾಧಕಗಳನ್ನು ಚಿತ್ರಿಸುತ್ತಾರೆ.

ದಲಿತ ಕಾದಂಬರಿಗಳಾದ ದೇವನೂರ ಮಹಾದೇವರ 'ಒಡಲಾಳ' ಮತ್ತು 'ಕುಸುಮಬಾಲೆ'ಕಾದಂಬರಿಗಳು ಜೀತವ್ಯವಸ್ಥೆಯ ಸ್ವರೂಪವನ್ನು ಚಿತ್ರಿಸುತ್ತವೆ. ಒಡಲಾಳದ ಸಾಕವ್ವನಿಗೆ ತನ್ನದೇ ಆದ ನಾಲ್ಕು ಎಕರೆ ಹೊಲ ಮತ್ತು ಸ್ವಂತ ಮನೆಯಿದೆ. ಸರ್ಕಾರಿ ಕಾಯಿದೆ ಕಾನೂನುಗಳ ಫಲವಾಗಿ ಆಕೆ ಜಮೀನ್ದಾರಳು ಎನಿಸಿಕೊಂಡಿದ್ದಾಳೆ. ಆದರೆ ಈ ಜಮೀನಿನಲ್ಲಿ ಯಾವುದೇ ಬೆಳೆಬೆಯಲು ಸಾಧ್ಯವಿಲ್ಲ ಅದು ಬರಡು ಭೂಮಿಯಾಗಿದೆ. ಸರ್ಕಾರ ದಲಿತರ ಉದ್ಧಾರದ ಹೆಸರಿನಲ್ಲಿ ದಲಿತರಿಗೆ ಇಂತಹ ಬರಡು ಭೂಮಿಯನ್ನು ಹಂಚಿದೆ. ಈ ಕಾರಣಕ್ಕಾಗಿ ಸಾಕವ್ವ ಮತ್ತು ಆಕೆಯ ಮಕ್ಕಳು ಬಡವರೇ. ಜೀವನ ನಿರ್ವಹಣೆಗಾಗಿ ಅವರು ಭೂಮಾಲಿಕರನ್ನು ಅವಲಂಬಿಸಬೇಕಾದ ಅನಿವಾರ್ಯತೆ ಇದೆ. ಇದಕ್ಕಾಗಿ ಅವರು ಸವರ್ಣೀಯ ಭೂಮಾಲಿಕರಲ್ಲಿ ಜೀತಗಾರಾಗಿ ಜೀವನ ನಡೆಸಬೇಕಾಗಿದೆ.

ಕುಸುಮಬಾಲೆಯಲ್ಲಿ ದಲಿತರ ಸ್ಥಿತಿ ಒಡಲಾಳದ ದಲಿತರ ಸ್ಥಿತಿಗಿಂತ ಭಿನ್ನವಾಗಿಲ್ಲ. ಇಲ್ಲಿಯೂ ಸಹ ದಲಿತರು ಸವರ್ಣೀಯರ ಜಮೀನಿನಲ್ಲಿ ಜೀತಗಾರಾಗಿ ದುಡಿಯುವ ದಲಿತ ವರ್ಗದ ಚಿತ್ರಣವಿದೆ. ಚನ್ನನ ತಮ್ಮಂದಿರು ಸಹ ಜೀತಗಾರರಾಗಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಚನ್ನನ ತಂದೆ-ತಾಯಿಗಳಿಗೆ ದೂರದ ಬೊಂಬಾಯಿಗೆ ಹೋಗಿ ಚನ್ನನನ್ನು ಹುಡುಕುವ ಮನಸ್ಸುತ್ತದೆ. ಅದಕ್ಕೆ ಹಣದ ಸಮಸ್ಯೆ ದುಪ್ಪನೆ ಎದುರಾಗುತ್ತದೆ. ಹಣದ ಸಮಸ್ಯೆಯನ್ನು ನಿವಾರಿಸಲು ಚನ್ನನ ತಾಯಿ ಕೆಳಗಿನಂತೆ ಉಪಾಯವನ್ನು ಮಾಡುತ್ತಾಳೆ. "ಇನ್ನೊಂದು ಗಂಡ್ನೂಜೀತ್ಕ ಇರುಸ್ ಬುಡಾವು. ಹೂಲ್ವ ಭೋಗ್ಯಕ್ಕ್ ಹಾಕ್ ಬುಡಾವು." (ದೇವನೂರ ಮಹಾದೇವ : ೧೯೮೮ : ೭೬) ಈ ಉಪಾಯದಲ್ಲಿ ಮತ್ತೆ ಸವರ್ಣೀಯರ ಶೋಷಣೆಗೆ ಗುರಿಯಾಗುವ ತಮ್ಮ ನಿರಂತರ ಹೋರಾಟದ ಸ್ವರೂಪ ಮೇಲಿನ ಹೇಳಿಕೆಯಲ್ಲಿ ಕಾಣಬಹುದು. ದಲಿತರಿಗೆ ಯಾವುದೇ ಕಷ್ಟ ಎದುರಾದರು ಹುಟ್ಟು-ಸಾವಿನ ಸಂದರ್ಭಗಳಲ್ಲಿ ಹಣದ ಅವಶ್ಯಕತೆ

ಉಂಟಾದರೆ ಅವರಿಗೆ ಮಕ್ಕಳನ್ನು ಜೀತಕ್ಕೆ ಇರಿಸುವುದಕ್ಕಿಂತ ಬೇರೆ ಉಪಾಯಗಳು ಹೊಳೆಯುವುದಿಲ್ಲ. ಹೊಳೆದರು ಅವರಿಗೆ ಸವರ್ಣೀಯರಿಂದ ಸುಲಭವಾಗಿ ಆರ್ಥಿಕ ಸಹಾಯ ದೊರಕುವುದಿಲ್ಲ. ಭೂಮಿ ಇಲ್ಲದ ದಲಿತರು ತಮ್ಮ ಮಕ್ಕಳನ್ನೇ ಆಸ್ತಿಯೆಂದು ಪರಿಗಣಿಸುವುದು ಈ ಕಾರಣಕ್ಕಾಗಿಯೇ ಇರಬಹುದು. ಗಂಡು ಮಕ್ಕಳಿಲ್ಲದ ಬಡವರು ತಮ್ಮ ಹೆಣ್ಣು ಮಕ್ಕಳನ್ನೇ ಜೀತಕ್ಕೆ ಇರಿಸುವ ಅನೇಕ ಉದಾಹರಣೆಗಳನ್ನು ಕನ್ನಡ ಸಾಹಿತ್ಯ ಕೃತಿಗಳಲ್ಲಿ ನೋಡಬಹುದು. ಶಿವರಾಮ ಕಾರಂತರ ಚೋಮನ ದುಡಿ ಕಾದಂಬರಿಯಲ್ಲಿ ಬೆಳ್ಳಿ ಚೋಮನ ಸಾಲವನ್ನು ತೀರಿಸಲು ಆಕೆ ಪ್ರಯತ್ನಿಸುವುದನ್ನು ನೋಡಬಹುದು. ಸಾಕವ್ವನ ಜಮೀನಿನ ಬಗ್ಗೆ ಆಕೆಯ ಸೊಸೆ ಚಲುವಮ್ಮನ ಅಭಿಪ್ರಾಯ ಹೀಗಿದೆ. " ಪರದೇಶಿ ನಿಂತ ಥರ ಇರೋ ಈ ಹಟ್ಟಿ ಕಂಡಿಲ್ವಾ ಮಳದೇವರು ಕಣ್ಣುಬಿಟ್ಟರೂ ಬೆಳೆ ಕಾಣದ ನಾಲ್ಕು ಎಕರ ಹೊಲ ಕಂಡಿಲ್ವಾ". (ದೇವನೂರ ಮಹಾದೇವ : ೧೯೭೯ : ೧೦) ಎಂಬ ಮಾತುಗಳಲ್ಲಿ ಜಮೀನನ್ನೂ ಹೊಂದಿರುವ ದಲಿತರ ದೀನ ಸ್ಥಿತಿಯನ್ನು ಕಾಣಬಹುದು.



ಕುಸುಮಬಾಲೆ ಕಾದಂಬರಿಯಲ್ಲಿ ಪ್ರಜ್ಞಾವಂತರೆಲ್ಲರೂ ಸಂಘಟನೆಯ ಮೂಲಕ ಜೀತ ವಿಮೋಚನಾ ಚಳುವಳಿಯನ್ನು ಕೈಗೊಳ್ಳುತ್ತಾರೆ. ಈ ವಿಷಯವನ್ನು ತಿಳಿದ ಸವರ್ಣೀಯರು ಆತಂಕಕ್ಕೆ ಒಳಗಾಗುತ್ತಾರೆ. ಅಂತೆಯೇ ದಲಿತರು ಈ ಚಳುವಳಿಯಲ್ಲಿ ಯಶಸ್ಸು ಪಡೆಯಬಾರದು ಎಂಬ ಆಶಯವನ್ನು ಕೆಲವು ಸವರ್ಣೀಯ ಜನರು ಹೊಂದಿದ್ದಾರೆ. ಏಕೆಂದರೆ ದಲಿತರಲ್ಲಿ ಜೀತದ ಬಗ್ಗೆ, ಅದರ ಅಪಾಯಗಳ ಬಗ್ಗೆ ಮನವರಿಕೆಯಾಗಬಾರದು ಒಂದು ವೇಳೆ ಇದರ ಬಗ್ಗೆ ಪ್ರಜ್ಞೆ ಬಂದರೆ ಅದರಿಂದ ಸವರ್ಣೀಯರಿಗೆ ನಷ್ಟವಾಗುತ್ತದೆ. ಈ ಕಾರಣಕ್ಕಾಗಿ ದಲಿತರ ಜೀತವಿಮೋಚನೆಯನ್ನು ಈ ಕೆಳಗಿನಂತೆ ವ್ಯಂಗ್ಯ ಮಾಡುತ್ತಾರೆ. "........'ಇನ್ಯಾನ್ನ ಮಾಡೋದು ಬುದ್ಯೂ. ನಿಂಜಾತ್ಯವರೆಲ್ಲಾ ನಾಳಕಿಂದ್ಲಿಯ ಜೀತ ಬುಟ್ ಬುಟ್ಟರಂತಲ್ಲಾ'....... ಅಂತ ಒಬ್ಬ ಅಂದು ನಿಲ್ಲುಸುದ್ರ ಇನ್ನೊಬ್ಬ 'ಜೀತಬುಟ್ ಮ್ಯಾಲ ಹೊಲಾರ್ನೇನ ಮಾತಾಡ್ಸಕ ಆದ್ದಯ್ಯ! ಯಾನಾರೂ ನೋಡಕ್ಕ ಆದ್ದಯ್ಯ! ಆಗ ಹೊಲಾರು ಅನ್ನ ತುಪ್ಪನಿಯ ಕಯ್ಯೋ ಉಣ್ಣಾದು.'..... ಈ ಮಾತುಗಳನ್ನು ಕೇಳಿ ಚನ್ನನ ಅಪ್ಪ ನಗುತ್ತಿದ್ದನು 'ನಿಲ್ಸುಡ ಸಿದ್ದಿಮಗ್ನ ನಿನ್ ನಗೂವ. ಚಂದ ಅಂತ ನಗ್ತಾನ ನಗೂವ. ಈಗ್ಲಾರೂ ತಿಳ್ಕಾ ಬಡ್ಡೇದ್ನೆ......ಇಲ್ಲಿಂದ ಓಟ್ ತಕ್ಕಂಡು ಗೆದ್ಧಂಡು ಹೊಯ್ತರಲ್ಲ............ಆ ನಿಮ್ ಜ್ಯಾತವರ ಆ ಇಂದ್ರಗಾಂಧಿ ಅಂಬವ್ನೇ ಜೀತ್ಕ ಇರ್ಸ್‌ಗುಂಡಿದ್ದಾಳಂತ! ಆಥರವಾಗಿ ಅವ್ಳೆ ಇರಬೇಕಾರ ಇನ್ನೂ ನಿಂಮ್ಗಳ ಜೀತಬುಡ್ರೋ ಅಂದಾಳ? ಇಲ್ಲಿ ನಾಕ್ ಐಕ ಕೂಕ್ಕಂಡ್ರ ದಿಳ್ಳಿಗ ಕೇಳ್ಸ ಮಾತುಡ ಅದೂ?" ೧೩ ಚನ್ನನಿಗೂ ದಲಿತ ಯುವಕರ ಪ್ರಯತ್ನ ಸಫಲವಾಗುತ್ತದೆ ಎಂಬ ವಿಶ್ವಾಸವಿಲ್ಲ. ಇಂದಿರಾ ಗಾಂಧಿಯೇ ದಲಿತರನ್ನು ಜೀತಕ್ಕೆ ಇಟ್ಟಿಕೊಂಡಿರುವಾಗ ಒಂದು ಸಣ್ಣ ಹಳ್ಳಿಯಲ್ಲಿ ದಲಿತರು ಜೀತ ಮಾಡುವುದನ್ನು ವಿರೋಧಿಸಲಾರಲು ಎಂಬುದು ಸವರ್ಣೀಯರ ನಂಬಿಕೆ. ಸವರ್ಣೀಯರ ಮಾತಿನಲ್ಲಿ ದಲಿತರು ಜೀತದಿಂದ ಮುಕ್ತಿ ಪಡೆಯುವುದು ಸುಲಭವಾದ ಕೆಲಸವಲ್ಲ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಇದನ್ನು ವ್ಯಕ್ತಪಡಿಸಲು ಅವರಿಗೆ ಧೈರ್ಯವಿಲ್ಲ. ಅದಕ್ಕಾಗಿ ವೃದ್ದ ಚನ್ನನ ತಂದೆಯನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಇದೇ ತರಹದ ಸಂದರ್ಭವನ್ನು ಮುಳ್ಳೂರು ನಾಗರಾಜರವರ ಮರಣಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿ ಕಾಣಬಹುದು. ಬಸವರಾಜುವಿನ ಉಪಟಳದಿಂದ ರೋಸಿ ಹೋದ ಸವರ್ಣೀಯರು ದಲಿತರ ಹಿರಿಯನಾದ ನಂಜನಲ್ಲಿ ತಮ್ಮ ಅಸಮಧಾನವನ್ನು ತೊಡಿಕೊಳ್ಳುವುದನ್ನು ಕಾಣಬಹುದು. ದಲಿತರು ಜೀತ ಮುಕ್ತವಾಗುದು ಅಸಂಭವ ಎನ್ನುವ ಅಭಿಪ್ರಾಯವಿರುವ ಸವರ್ಣೀಯರು 'ನರಿ ಲಿಂಗ ಕಟ್ಟಿಸಿಕೊಂಡ ಕಥೆ'ಯ ಮೂಲಕ ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ.

ಹೀಗೆ ದಲಿತ ಕಾದಂಬರಿಗಳಲ್ಲಿ ಹಾಗೂ ಕುವೆಂಪುರವರ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು

ಕಾದಂಬರಿಗಳಲ್ಲಿ ಜೀತ ಪದ್ಧತಿಯ ಕರಾಳ ಮುಖಗಳನ್ನು ಚಿತ್ರಿಸಿದ್ದಾರೆ. ಉಳಿಗಮಾನ್ಯ ವ್ಯವಸ್ಥೆಯ ದೌರ್ಜನ್ಯಗಳನ್ನು ನೈಜ್ಯವಾಗಿ ಚಿತ್ರಿಸಿದ್ದಾರೆ. ಆದರೆ ಕುವೆಂಪುರವರು ದಲಿತ ಚಿತ್ರಣಕ್ಕೂ ದಲಿತ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತರಿಗೂ ಹಲವಾರು ಸಾಮ್ಯ-ಭಿನ್ನತೆಗಳಿವೆ. ದಲಿತ ಕಾದಂಬರಿಗಳಲ್ಲಿನ ದಲಿತ ಪಾತ್ರಗಳಿಗೆ ಜೀತದಿಂದ ಮುಕ್ತಿ ಪಡೆಯಬೇಕು ಎಂಬ ಹಂಬಲವಿದೆ. ಅದಕ್ಕಾಗಿ ಅವರು ಜೀತವಿಮೋಚನೆಯಂಥ ಪ್ರಗತಿಪರ ಚಳುವಳಿಯನ್ನು ಕೈಗೆತ್ತಿಕೊಂಡಿದ್ದಾರೆ. ಆದರೆ ಕುವೆಂಪು ಕಾದಂಬರಿಗಳಲ್ಲಿನ ದಲಿತ ಪಾತ್ರಗಳಿಗೆ ಈ ಹಂಬಲ ಇಲ್ಲದಿರುವುದನ್ನು ಗಮನಿಸಬಹದುದು. ದಲಿತರು ವಿದ್ಯಾವಂತರಾಗಿದಿದ್ದರಿಂದ ದಲಿತ ಸಂದರ್ಭದಲ್ಲಿ ಈ ಪ್ರಗತಿಪರ ಚಿಂತನೆ ಅವರಲ್ಲಿ ಮೂಡಿದೆ. ದಲಿತ ಕಾದಂಬರಿಯ ದಲಿತ ಪಾತ್ರಗಳು ಸ್ವತಃ ಭೂಮಿ ಹಾಗೂ ಜಮೀನುಗಳನ್ನು ಹೊಂದಿವೆ. ಕುವೆಂಪು ಕಾದಂಬರಿಗಳಲ್ಲಿನ ದಲಿತ ಪಾತ್ರಗಳು ತುಂಡು ಭೂಮಿಯನ್ನು ಹೊಂದಿಲ್ಲದಿರುವುದನ್ನು ನೋಡಬಹುದು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಸ್ವಾತಂತ್ರ್ಯ ನಂತರದಲ್ಲಿ ದಲಿತರ ಜೀವನದ ಬಗ್ಗೆ ಅಂಬೇಡ್ಕರ್ ಬಹುವಾಗಿ ಚಿಂತಿಸಿ ಅವರ ಸಾಮಾಜಿಕ ಸಾಂಸ್ಕೃತಿಕ ಬದುಕಿನಲ್ಲಿ ಬದಲಾವಣೆಯನ್ನು ತರಲು ಪ್ರಯತ್ನಿಸಿದರು. ಆದರೆ ಕುವೆಂಪು ಸಂದರ್ಭದಲ್ಲಿ ಅಂತಹ ಸಾಂಸ್ಕೃತಿಕ ನಾಯಕರಾರು ದಲಿತ ಪರವಾಗಿ ಚಿಂತಿಸುತ್ತಿರಲ್ಲ. ಆ ಕಾರ್ಯವನ್ನು ಸ್ವತಃ ಕುವೆಂಪುರವರೆ ಕೈಗೆತ್ತಿಕೊಂಡರು. ಪರಿಣಾಮವಾಗಿ ಅವರ ಕಾದಂಬರಿಗಳಲ್ಲಿ ದಲಿತಪರ ಕಾಳಜಿ ಅಭಿವ್ಯಕ್ತವಾಗಿದೆ.

**೫. ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿನ ಗ್ರಾಮೀಣ ನ್ಯಾಯ ವ್ಯವಸ್ಥೆ :** ಭಾರತದ ನ್ಯಾಯ ಪದ್ಧತಿಯು ಪ್ರಾಚೀನ ಕಾಲದಿಂದ ಇಂದಿನವರೆಗೂ ಬಲಿಷ್ಠರ ಪರವಾಗಿದೆ. ಅದು ಜಾತೀಯತೆಯಿಂದ ಮುಕ್ತವಾಗಿಲ್ಲ ಎನ್ನುವುದು ಹಲವು ವಿಚಾರವಾದಿಗಳ ಅಭಿಪ್ರಾಯ. ಆಧುನಿಕ ಸಂದರ್ಭದಲ್ಲಿ ನ್ಯಾಯ ಪದ್ದತಿ ಸಾಕ್ಷಿಗಳ ಹೇಳಿಕೆಯ ಮೇಲೆ ನಿಂತಿದೆ. ನವೋದಯದ ಸಂದರ್ಭದಲ್ಲಿ ಗ್ರಾಮೀಣ ಪರಿಸರದ ದಲಿತರು, ಸವರ್ಣೀಯರು, ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಕೋರ್ಟ್ ಕಛೇರಿಗಳಿಗೆ ಹೋಗುತ್ತಿರಲಿಲ್ಲ. ಅವರು ತಮ್ಮ ಊರಿಗಳಲ್ಲಿಯೇ ಊರಿನ ಮುಖಂಡರ ಸಮ್ಮುಖದಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದರು. ಕ್ರಮೇಣ ಇಂತಹ ನ್ಯಾಯ ಸ್ಥಾನಗಳು ಜಾತಿಯ ಅಜಾನು ಬಾಹುಗಳಿಂದ ಬಂದಿಯಾದವು. ನ್ಯಾಯ ಎನ್ನುವುದು ಮೇಲ್ವರ್ಗದ ಸೋತ್ತಾಯಿತು. ಶ್ರೀಮಂತರು ತಮ್ಮ ಚಾಣಾಕ್ಷತನದಿಂದ ಬಡಜನರನ್ನು, ಅಸಹಾಯಕರನ್ನು ನ್ಯಾಯದ ಮೂಲಕ ಶೋಷಣೆಗೆ ಒಳಪಡಿಸಲು ಪ್ರಾರಂಭಿಸಿದರು. ಈ ಅಂಶಗಳನ್ನು ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಾಣಬಹುದು. ಹಳೇ ಪೈಕದವರು ಒಕ್ಕಲಿಗರನ್ನು ಯಾವ ಸಂದರ್ಭದಲ್ಲಿಯು ಅನುಕರಿಸಬಾರದು. ಎಂಬ ನಿಯಮವನ್ನು ಮೇಲ್ವರ್ಗದವರು ವಿಧಿಸಿದ್ದರು. ಮದುವೆಯ ಸಂದರ್ಭದಲ್ಲಿ ಅವರು ದಂಡಿಗೆ, ಕುದುರೆಗಳನ್ನು ಬಳಸಬಾರದು ಎಂದು ಸರ್ಕಾರದವರು ಒಕ್ಕಲಿಗರ ಪರವಾಗಿ ತೀರ್ಮಾನ ನೀಡಿದ್ದನ್ನು ಕುವೆಂಪುರವರು ಹೀಗೆ ವ್ಯಂಗ್ಯ ಮಾಡುತ್ತಾರೆ. " ಸರ್ಕಾರದ ಇತ್ಯಾರ್ಥಕ್ಕೆ ಕಾರಣ ನ್ಯಾಯ ಪಕ್ಷಪಾತವಾಗಿರಲಿಲ್ಲ. ಬಲಪಕ್ಷಪಾತವಾಗಿತ್ತು. ಬಲಿಷ್ಠರೂ ಬಹು ಸಂಖ್ಯೆಯವರೂ, ಆದವರ ಕಡೆ ಸರ್ಕಾರವಿದ್ದರೆ ಅದಕ್ಕೂ ಕ್ಷೇಮ ನ್ಯಾಯ ರಕ್ಷಣೆಯು ಸುಲಭ ಸಾಧ್ಯ. ಅದರಲ್ಲಿಯೂ ಮೈಸೂರು ಸಂಸ್ಥಾನದ ಅಂಚಾಗಿದ್ದ ದುರ್ಗಮವಾದ ಪರ್ವತಾರಣ್ಯಗಳ ಬೀಡಾಗಿ, ಆಗತಾನೆ ನಗರ, ಕೌಲೆದುರ್ಗ ಮೊದಲಾದ ಪಾಳೆಯ ಪಟ್ಟುಗಳ ಕಿರುಕುಳದಿಂದ ಪಾರಾಗಿದ್ದ ಮಲೆನಾಡಿಗೆ ಅಲ್ಲಿದ್ದ ಬಹುಸಂಖ್ಯೆಯ ಬಲಿಷ್ಠರ ಇಚ್ಛೆಯಂತೆ ಸರ್ಕಾರದ ಕಾನೂನಾದುದರಲ್ಲಿ ಆಶ್ಚರ್ಯವೇನಿಲ್ಲಾ."೧೪ ಎಂಬ ಉಲ್ಲೇಖದಲ್ಲಿ ಎಂಬ ಉಲ್ಲೇಖದಲ್ಲಿ ಮೇಲಿನ ಅಭಿಪ್ರಾಯ ವ್ಯಕ್ತವಾಗಿದೆ. ಇತರಹದ ನ್ಯಾಯ ವ್ಯವಸ್ಥೆ ಗ್ರಾಮೀಣ ಪ್ರದೇಶದಲ್ಲಿ ಅಪಮೌಲ್ಯಕ್ಕೆ ಒಳಗಾಗಿರುವುದನ್ನು

ಕಾಣುತ್ತೇವೆ. ಇದೇ ಕಾದಂಬರಿಯಲ್ಲಿ ಹಳೇ ಪೈಕದ ಸೇಸನಾಯ್ಕ ಕಾಡಿಯೊಂದಿಗೆ ಅನೈತಿಕ ಸಂಬಂಧ ಏರ್ಪಟ್ಟು ಅವಳು ಗರ್ಭಿಣಿಯಾಗುತ್ತಾಳೆ. ಈ ವಿಚಾರದ ವಿಚಾರಣೆಗಾಗಿ ಬಂದ ಹಳೇ ಪೈಕದ ಮುಖಂಡರುಗಳಿಗೆ ಸೇಸನಾಯ್ಕ ತುಂಡು ಕಡುಬು ಹಾಗೂ ಕಳ್ಳುಗಳಿಂದ ಅವರನ್ನು ಸಂತೃಪ್ತಗೊಳಿಸಿ ನ್ಯಾಯವನ್ನು ಕೊಂಡುಕೊಳ್ಳುತ್ತಾನೆ. ಈ ಪ್ರಸಂಗವನ್ನು ಕುವೆಂಪುರವರು ಹೀಗೆ ವಿವರಿಸುತ್ತಾರೆ. "ಕಾಡಿಯ ವಿಚಾರಣೆಗಾಗಿಯೇ ಆ ದಿನ ಬೆಳಿಗ್ಗೆ ಲಕ್ಕುಂದದಲ್ಲಿ ಸೇಸನಾಯ್ಕನ ಮನೆಯಲ್ಲಿ ಸೇರಿದ್ದ ಮುಖಂಡರು ಅದೊಂದನ್ನು ಬಿಟ್ಟು ಉಳಿದ ಅನೇಕ ವಿಚಾರಗಳನ್ನು ಚರ್ಚಿಸಿದರು. ಕಾರಣವೇನೆಂದರೆ ಅನೇಕ ಅನೇಕರಿಗೆ ಕಾಡಿಯ ಅ ಸ್ಥಿತಿಗೆ ಸೇಸನಾಯ್ಕನೇ ಕಾರಣನಾಗಿದ್ದಾನೆ. ಎಂಬ ಒಳಗುಟ್ಟು ಹೊಳೆಯತೊಡಗಿತ್ತು. ಜೊತೆಗೆ ಸೇಸನಾಯ್ಕನು ಒಳ್ಳೆಯ ಉಪಾಯದಿಂದ ಬೇರೆಯ ಪ್ರಸ್ತಾಪಗಳನ್ನೆತ್ತಿ ತನಗೆ ತೊಂದರೆಯಾಗದ ರೀತಿಯಲ್ಲಿ ವಾದ ಮುಖವನ್ನು ತಿರುಗಿಸಿದ್ದನು."೧೫ ಈ ಹೇಳಿಕೆಯು ಸಹ ಗ್ರಾಮೀಣ ನ್ಯಾಯ ಪದ್ಧತಿಯು ದೀನದುರ್ಬಲರ ಪರವಾಗಿದರೆ ಅದು ಮೇಲ್ವರ್ಗದ, ಶ್ರೀಮಂತರ ಕೈಯಲ್ಲಿ ಇದೆ. ಎಂಬ ಅಂಶವನ್ನು ಕುವೆಂಪುರವರು ದೃಢಪಡಿಸುತ್ತಾರೆ.

ಗ್ರಾಮೀಣ ನ್ಯಾಯುಪದ್ದತಿಗಳಲ್ಲಿ ಏಕವ್ಯಕ್ತಿಯ ತೀರ್ಮಾನಗಳಿಂದ ಅನೇಕ ನಿರಪರಾಧಿಗಳಿಗೆ ಶಿಕ್ಷೆಯಾಗುತ್ತದೆ.ಜೀತಗಾರರು ತಿಳಿಯದೆ ಮಾಡಿದ ತಪ್ಪಿಗೂ ಕ್ರೂರ ಶಿಕ್ಷೆ ವಿಧಿಸುವ ಉಳಿಗಮಾನ್ಯ ವ್ಯವಸ್ಥೆಯ ಕ್ರೂರತನವನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಅವರ ಮಲೆಗಳಲ್ಲಿ ಮದುಮಗಳು ಹಾಗೂ ಕಾನೂರು ಹೆಗ್ಗಡಿತಿ ಕಾದಂಬರಿಗಳು ಮೇಲಿನ ಅಂಶವನ್ನು ದೃಢೀಕರಿಸುತ್ತವೆ. ಒಮ್ಮೆ ಬೆಟ್ಟಳ್ಳಿ ಗೌಡರಿಗೂ ಸಿಂಬಾವಿ ಹೆಗ್ಗಡೆಯವರಿಗೂ ಆಳಿನ ವಿಚಾರದಲ್ಲಿ ಮನಸ್ತಾಪವಾಗುತ್ತದೆ. ಮಧ್ಯಪ್ರವೇಶಿಸಿದ ಕಲ್ಲೂರ ಸಾಹುಕಾರ ಮಂಜ ಭಟ್ಟರು ತಮ್ಮ ಚಾಣಾಕ್ಷತನದಿಂದ ಈ ಸಮಸ್ಯೆಯನ್ನು ಬಗೆ ಹರಿಸುತ್ತಾರೆ. ಭೂಮಾಲಿಕರು ತಮ್ಮ ಜೀತದ ಆಳುಗಳನ್ನು ಪಶುಗಳಂತೆ ಅದಲು ಬದಲು ಮಾಡುವ ಕ್ರಮ ಕುವೆಂಪು ಕಾದಂಬರಿಗಳಲ್ಲಿ ಕಾಣಬಹುದು. ಮೇಲ್ವರ್ಗದವರ ಸಮಧಾನಕ್ಕಾಗಿ ಜೀತಗಾರರನ್ನು ಅವರ ಹಕ್ಕುಗಳಿಂದ ವಂಚಿಸಿ ಶೋಷಣೆಗೆ ಗುರಿಪಡಿಸುವ ನ್ಯಾಯ ಪದ್ಧತಿ ಅಮಾನವೀಯವಾದುದಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಗುತ್ತಿ ತನ್ನ ಸಂಗಾತಿ ತಿಮ್ಮಿಯನ್ನು ಮೋಸದಿಂದ ಕರೆದುಕೊಂಡು ಬಂದದ್ದು ಕಲ್ಲೇಗೌಡರಿಗೆ ಸಹಿಸಲಾರದ ಅಪರಾಧವಾಗಿತ್ತು. ಇದಕ್ಕೆ ಎರಡು ಕಾರಣಗಳಿದ್ದವು ಮೊದಲನೆಯದು ಸಿಂಬಾವಿಗೂ–ಬೆಟ್ಟಳ್ಳಿಗೂ ಇದ್ದ ಚರಿತ್ರಿಕ ವೈಮನಸ್ಸು. ಮತ್ತೊಂದು ತಮಗೆ ಒಬ್ಬ ಕೂಲಿ ಆಳು ಕಡಿಮೆಯಾದುದರ ಬಗ್ಗೆ ತುಂಬಾ ಅಸಮಧಾನವಾಗಿತ್ತು. ಈ ಕಾರಣಕ್ಕಾಗಿ ಗೌಡರು ಸಣ್ಣ ಬೀರನಿಗೆ 'ಹೊನ್ನಾಳ್ಳಿ ಹೊಡ್ತ'ದ ರುಚಿ ತೋರಿಸಿದರು. ಇದು ಉಳಿಗಮಾನ್ಯ ವ್ಯವಸ್ಥೆಯ ಕ್ರೂರ ನಡವಳಿಕೆಗಳಿಗೆ ಒಂದು ಒಳ್ಳೆಯ ಉದಾಹರಣೆ. ತಪ್ಪು ಮಾಡಿದ ಜೀತಗಾರರಿಗೆ ಸಾಬರುಗಳಿಂದ ದಂಡನೆಯನ್ನು ಭೂಮಾಲಿಕರು ವಿಧಿಸುತ್ತಿದ್ದರು. ಈ ಘೋರ ಶಿಕ್ಷೆಯಿಂದ ಅನೇಕ ಜೀತಗಾರರು ಪ್ರಾಣವನ್ನು ಕಳೆದುಕೊಂಡ ಅನೇಕ ಸಂದರ್ಭಗಳನ್ನು ಕುವೆಂಪುರವರು ತಮ್ಮ ಕಾದಂಬರಿಯಲ್ಲಿ ದಾಖಲಿಸಿದ್ದಾರೆ. ಹೀಗೆ ಹೊನ್ನಾಳ್ಳಿ ಹೊಡ್ತಕ್ಕೆ ಬಲಿಯಾದ ಸಣ್ಣ ಬೀರ ಇಜಾರದ ಸಾಬಿಯ ಮೇಲೆ ಸೇಡು ತೀರಿಸಿಕೊಳ್ಳುವ ಮಾತನ್ನು ಆಡುತ್ತಾನೆ. ಅವನಿಗೆ ಶಿಕ್ಷೆ ವಿಧಿಸಿದ ಕಲ್ಲಯ್ಯಗೌಡರ ಮೇಲೆ ಕೋಪವಿಲ್ಲದೆ ಇಜಾರದಸಾಬಿಯ ಮೇಲೆ ಅವನಿಗೆ ಕೋಪ ಉಂಟಾಗುವುದು ಅಂದಿನ ಜೀತಗಾರರ ಮುಗ್ಧತೆಯನ್ನು ತಿಳಿಸುತ್ತದೆ. ಪಾದ್ರಿ ಜೀವರತ್ನಯ್ಯ ಗುತ್ತಿಯ ಮೇಲೆ ಕೋಪಗೊಂಡಿದ್ದಾನೆ. ಏಕೆಂದರೆ ತಿಮ್ಮಿ ಬಚ್ಚನನ್ನು ತಿರಸ್ಕರಿಸಿದ್ದು ಪಾದ್ರಿಗೆ ಸಹಜವಾಗಿ ಹಿನ್ನಡೆಯುಂಟಾಗಿದೆ. ಈ ಕಾರಣಕ್ಕಾಗಿ ಆತ ಗುತ್ತಿಯ ಮೇಲೆ ಸೇಡು ತೀರಿಸಿಕೊಳ್ಳಲು ಕಾಯುತ್ತಿದ್ದಾನೆ. ಇಂತಹ ಸಂದಿಗ್ದ ಪರಿಸ್ಥಿತಿಯಲ್ಲಿ

ಇಜಾರದಸಾಬಿ ಗುತ್ತಿಯ ಗಬ್ಬದ ಆಡನ್ನು ಅಪಹರಿಸಿ ಕತ್ತರಿಸಿ ತಿನ್ನುತ್ತಾನೆ. ಸಮಯ ಕಾಯುತ್ತಿದ್ದ ಸಣ್ಣ ಬೀರ ಇಜಾರದಸಾಬಿಯ ಬಲಗೈ ಹೆಬ್ಬೆರಳನ್ನು ಕತ್ತರಿಸಿ ಓಡಿಹೋಗುತ್ತಾನೆ. ಜೀವರತ್ನಯ್ಯ ಹಾಗೂ ಕಲ್ಲಯ್ಯಗೌಡರು ಈ ಅಪರಾಧವನ್ನು ಗುತ್ತಿಯ ಮೇಲೆ ಹೊರಿಸಿ ಪೋಲೀಸ್‌ನವರಿಗೆ ಗುತ್ತಿಯನ್ನು ಹಿಡಿದುಕೊಡಲು ಕಾಯುತ್ತಿದ್ದಾರೆ. ಗುತ್ತಿಯನ್ನು ಬಂಧಿಸಲು ಪೋಲೀಸರು ಸಿಂಬಾವಿಯ ದಲಿತ ಕೇರಿಗೆ ಬಂದಾಗ, ದಲಿತ ಸಮುದಾಯದವರು ಆಧುನಿಕ ಪೋಲೀಸ್ ವ್ಯವಸ್ಥೆಯನ್ನು ಕಂಡು ಹೆದರುವ ಪ್ರಸಂಗ ಈ ಕೆಳಗಿನಂತಿದೆ. " ಪೋಲೀಸಿನವರು ತನ್ನನ್ನು ಹಿಡಿದು, ಕೈಗೆ ಕೋಳಹಾಕಿ, ತೀರ್ಥಹಳ್ಳಿಗೆ ಕರೆದುಕೊಂಡು ಹೋಗಲು ಬಂದಿದ್ದಾರೆ ಎಂಬ ಸುದ್ದಿ ತಿಳಿದ ಕೂಡಲೆ ಗುತ್ತಿ ಕಂಗಲಾಗಿದ್ದನು. ಅವನ ಅಪ್ಪ ಕರಿಸಿದ್ದನೂ ಅಮ್ಮ ಗಿಡ್ಡಿಯೂ ಯಾರಾದರೂ ಸತ್ತರೆ ಬಾಯಿ ಬಡಿದುಕೊಳ್ಳುವಂತೆ ಲಬಲಬಿಸಿದ್ದರು. ಕೇರಿಗೆ ಪೋಲೀಸರು ಬರುತ್ತಾರೆ ಎಂಬ ವಾರ್ತೆ ಕೇಳಿದೊಡನೆ ಕೇರಿಯ ಗಂಡಸರು ಹೆಂಗಸರು ಎಲ್ಲಾರೂ ತಲೆ ತಪ್ಪಿಸಿಕೊಳ್ಳಲು ಕಾಡು ಹತ್ತಿದರು. ನಡೆಯಲಾರದ ಮುದುಕ ಮುದುಕಿಯರೂ ಮಕ್ಕಳೂ ಮಾತ್ರ ತಮ್ಮ ತಮ್ಮ ಬಿಡಾರದ ತಟ್ಟಿ ಬಾಗಿಲುಗಳನ್ನು ಭದ್ರವಾಗಿ ಹಾಕಿಕೊಂಡು, ಒಲೆಯನ್ನು ಹೊತ್ತಿಸದೆ ಹುದುಗಿ ಬಿಟ್ಟಿದ್ದರು." [೧೬] ಈ ಉಲ್ಲೇಖದಲ್ಲಿ ದಲಿತರಿಗೆ ಆಧುನಿಕ ನ್ಯಾಯ ವ್ಯವಸ್ಥೆಯ ಬಗ್ಗೆ ಇರುವ ಹೆದರಿಕೆಯನ್ನು ಸೂಚಿಸುತ್ತದೆ. ಇಲ್ಲಿ ಬರುವ ಪೋಲಿಸರು ನಿರಪರಾಧಿಯಾದ ಗುತ್ತಿಯ ಪರವಾಗಿರದೆ ಕಲ್ಲಯ್ಯಗೌಡರು ಮತ್ತು ಪಾದ್ರಿ ಜೀವರತ್ನಯ್ಯನ ಪರವಾಗಿರುವುದನ್ನು ಗಮನಿಸಬಹುದು. ವ್ಯವಸ್ಥೆಯು ನ್ಯಾಯ ಪದ್ಧತಿಯನ್ನು ನಿಯಂತ್ರಿಸುವ ಸ್ವರೂಪವನ್ನು ಕುವೆಂಪುರವರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಗುತ್ತಿಯ ಅತಂತ್ರ ಬದುಕಿಗೆ ಆಧುನಿಕ ನ್ಯಾಯ ಪದ್ಧತಿ ಸಹಾಯ ಮಾಡಲಿಲ್ಲವೆಂಬುದು ವಿಪರ್ಯಾಸ.

ದಲಿತ ಕಾದಂಬರಿಗಳಾದ 'ಮರಣಮಂಡಲ ಮಧ್ಯದೊಳಗೆ' ಮತ್ತು 'ಕುಸುಮಬಾಲೆ' ಕಾದಂಬರಿಗಳಲ್ಲಿ ಗ್ರಾಮೀಣ ನ್ಯಾಯ ಪಂಚಾಯಿತಿಯ ಚಿತ್ರಣಗಳು ದಾಖಲಾಗಿವೆ. ಮರಣಮಂಡಲ ಮಧ್ಯದೊಳಗೆ ಕಾದಂಬರಿಯಲ್ಲಿ ಇಂತಹ ಮೂರು ಪ್ರಸಂಗಗಳು ದಾಖಲಾಗಿವೆ. ಗೌಡರ ಮಗ ಚಂದ್ರ ಮತ್ತು ಸಿದ್ದಿಯ ಅನೈತಿಕ ಸಂಬಂಧದ ಸಂದರ್ಭದಲ್ಲಿ, ಪಟೇಲರ ಮಗ ನಿಂಗಪ್ಪ ಮತ್ತು ಕೆಂಚಮ್ಮನರ ಪ್ರಕರಣ ಮತ್ತು ದಲಿತರ ರಂಗ-ರಂಗಿಯ ಪ್ರಸಂಗದಲ್ಲಿ ನ್ಯಾಯ ಪಂಚಾಯಿತಿಯ ಚಿತ್ರಣಗಳನ್ನು ಚಿತ್ರಿಸಿದ್ದಾರೆ.

ಗೌಡರ ಮಗ ಚಂದ್ರ ಹಾಗೂ ದಲಿತ ಹೆಣ್ಣು ಮಗಳು ಸಿದ್ದಿಯ ನಡುವೆ ಅನೈತಿಕ ಸಂಬಂಧವಿದೆ ಇದನ್ನು ತಿಳಿದ ಬಸವರಾಜು ಅವರನ್ನು ಶಿಕ್ಷೆಗೆ ಗುರಿಪಡಿಸುತ್ತಾನೆ. ಪೇಟೆಯ ರಸ್ತೆಯಲ್ಲಿ ಇಬ್ಬರಿಗೂ ಹುಣಿಸೆಬರಲಿನಿಂದ ಹೊಡೆದು ಊರಿಗೆ ಕರೆತರುತ್ತಾನೆ. ಅವರನ್ನು ಕಂಬಕ್ಕೆ ಕಟ್ಟಿ ಹಾಕಿ ಅವರು ವಿವಾಹವಾಗಲು ಒಪ್ಪುವವರೆಗೂ ಇದರಿಂದ ಬಿಡುಗಡೆ ಮಾಡುವುದಿಲ್ಲ. ತನ್ನ ಮಗ ದಲಿತ ಹೆಣ್ಣನ್ನು ಮದುವೆಯಾಗಿ ಬಿಡುತ್ತಾನೆ ಎಂಬ ಹೆದರಿಕೆಯಿಂದ ಗೌಡರು ಪೋಲೀಸಿನವರ ಸಹಾಯವನ್ನು ಬೇಡುತ್ತಾರೆ. ಸವರ್ಣೀಯರ ರಕ್ಷಣೆಗೆ ಬಂದ ಪೋಲೀಸರು ಬಸವರಾಜುವನ್ನು ಬಂಧಿಸುತ್ತಾರೆ.

ಲಿಂಗಪ್ಪ ಮತ್ತು ಕೆಂಚಮ್ಮರ ಪ್ರಕರಣ ಇದು ಬಲತ್ಕಾರದ ಪ್ರಕರಣವಾಗಿದೆ. ಇಲ್ಲಿ ಪಟೇಲರ ಮಗ ಲಿಂಗಪ್ಪ ದಲಿತ ಹೆಣ್ಣು ಕೆಂಚಮ್ಮನನ್ನು ಕೆಣಕುತ್ತಾನೆ. ಇದರಿಂದ ರೋಷಗೊಂಡ ಬಸವರಾಜು ಲಿಂಗಪ್ಪನ ಎದುರೆ ಆತನ ಹೆಂಡತಿಯನ್ನು ಅತ್ಯಾಚಾರ ಮಾಡುತ್ತಾನೆ. ಈ ಘಟನೆ ಬಸವರಾಜುವಿನ ದುಡುಕುತನವನ್ನು ತೋರಿಸುತ್ತದೆ. 'ಸೇಡಿಗೆ-ಸೇಡು'ವಿನ ಹಿನ್ನಲೆಯಲ್ಲಿ ಈ ಘಟನೆ ನಡೆಯುತ್ತದೆ. ಸವರ್ಣೀಯ ಯಜಮಾನರುಗಳು ಈ ಘಟನೆಯಿಂದ

ವಿಚಲಿತರಾಗುತ್ತಾರೆ. ಬಸವರಾಜುವಿನ ಪುಂಡಾಟಗಳನ್ನು ದಲಿತ ಕೇರಿಯ ಹಿರಿಯರಿಗೆ ಒಪ್ಪಿಸುವ ಕೆಲಸ ಮಾಡುತ್ತಾರೆ. ಮೇಲಿನ ಎರಡು ಘಟನೆಗಳಲ್ಲಿ ಬಸವರಾಜು ತಪ್ಪು ಮಾಡಿದವರನ್ನ ಕಾನೂನಿಗೆ ವಹಿಸದೆ ಸ್ವತಃ ತಾನೇ ಶಿಕ್ಷೆ ವಿಧಿಸುವುದು ದಲಿತರಿಗೆ ನ್ಯಾಯಾಲಯದಲ್ಲಿ ಅಥವಾ ಊರ ಪಂಚಾಯ್ತಿಯಲ್ಲಿ ದಲಿತ ಪರವಾದ ನ್ಯಾಯ ದೊರಕಲಾರದು ಎಂಬ ಮನೋಧರ್ಮ ಕಾರಣವಿರಬಹುದು.

ರಂಗ-ರಂಗಿಯ ಪ್ರಸಂಗದಲ್ಲಿ ಇಬ್ಬರೂ ದಲಿತರೆ ಆಗಿರುವುದರಿಂದ ಊರ ಪಂಚಾಯ್ತಿ ಮುಖಂಡರು ನ್ಯಾಯ ತೀರ್ಮಾನ ಮಾಡುತ್ತಾರೆ. ಆದರೆ ರಂಗಿ ನಾಪತ್ತೆಯಾಗುತ್ತಾಳೆ. ಮುಂದೆ ಪೋಲೀಸರ ಸಮಕ್ಷಮದಲ್ಲಿ ನ್ಯಾಯ ತೀರ್ಮಾನ ನಡೆಯುವಾಗ ರಂಗಿ ಪ್ರತ್ಯಕ್ಷಳಾಗುತ್ತಾಳೆ. ಅಂದರೆ ರಂಗಿ ಸಾಂಪ್ರದಾಯಿಕ ನ್ಯಾಯ ವ್ಯವಸ್ಥೆಯ ಮೇಲೆ ಇರುವ ಅಪನಂಬಿಕೆಯನ್ನು ಬಯಲು ಮಾಡುತ್ತಾಳೆ. ಇದು ದಲಿತರಿಗೆ ಅಗತ್ಯವಾದ ಮಾರ್ಗ ಎಂಬ ಆಶಯವನ್ನು ಹೊಂದಿದ್ದಾಳೆ.

ಕುಸುಮಬಾಲೆ ಕಾದಂಬರಿಯಲ್ಲಿ ಗಾರಸಿದ್ಮಾವನು ಸವರ್ಣೀಯರ ತೋಟದಲ್ಲಿ ಹದಿನಾರು ಎಳನೀರನ್ನು ಕದ್ದು ಸಿಕ್ಕಿಹಾಕಿಕೊಳ್ಳುತ್ತಾನೆ. ಸವರ್ಣೀಯರು ಅವನನ್ನು ಮಠದ ಮುಂದಿನ ನ್ಯಾಯ ಕಂಬಕ್ಕೆ ಕಟ್ಟಿ ಥಳಿಸುತ್ತಿರುತ್ತಾರೆ. ಈ ಪ್ರಸಂಗವನ್ನು ದೇವನೂರ ಮಹಾದೇವರವರು ಯಾವುದೇ ಉದ್ವೇಗಕ್ಕೆ ಒಳಗಾಗದೆ ನಿರ್ಭಾವುಕರಾಗಿ ಈ ಕೆಳಗಿನಂತೆ ಚಿತ್ರಿಸಿದ್ದಾರೆ. " ಆ ಕಟ್ಟಾಕಿಸಿಕೊಂಡ ಅವನ ದೇಹವು ಹೊಡೆದವರ ಕಯ್ಗಳನ್ನು ನೋಯುಸ್ತ ಹಾಗಾಗಿ ನೊಂದ ಕಯ್ಗಳಿಗೆ ಇಶ್ರಾಂತಿ ಕೊಡಲೋಸುಗ ಪ್ರತಿ ಹೊಡ್ತದ ರೌಂಡ್‌ನ ನಡುವೂ ಡೈಲಾಗ್ ನಡೆಯುತ್ತಿತ್ತು. 'ಬಡೇದ್ನೆ ನಿನ್ತಪು ತಪ್‌ನಿಗ ತಕ್ಕಳ್ದೇ ಇದ್ರ ನಾನು ನಮ್ಮಪ್ಪನ್ಗ ಹುಟ್ಟಿದ್ ಮಗ್ನೆ ಅಲ್ಲ ತಿಳ್ಕ. ಹೊಡಸ್ಕಂಡು ಸುಮ್ನಾಯಾಕ್ ಸತ್ತೋದಯಿ...... ಸುಮ್ನ ನೂರೊಂದ್ ರೂಪಾಯಿ ಮಡುಗ್ ಬುಡು.......'

'ತಪ್ಪ ಮಡ್ಗಕ ನಾ ತಪ್ಪು ಮಾಡಿರದಾರುವಿ ಯಾನ್ನಪ್ಪ ?'

'ಮನ ಅದ್ನೆ ಅಂದನು ? ಆಗಾರ ನಿಮ್ಮಪ್ಪನ ತೋಟ್ದಲ್ಲುಡ ನೀನು ಎಳ್ನೀರ ಕಿತ್ತಿರದು ಆಗಾರ ?'

'ಕುಡಿಯಾಕ ಅಂತ ಎಳ್ನೀರ ಕಿತ್ಗಂಡ್ರೂ ತಪ್ಪಪ ಅದೂವಿ ?'

'ಅಡಡೆ ಇದುಕುಡ ಮಾತು ! ಕುಡಿಯಾಕ ? ಯಾನುಡ ಯಾನುಡಾ ? ಅದು ಕುಡಿಯಾಕ ? ಒಂದ್ ಕಿತ್ಗಯ್ಯ ಸಾಲ್ನಿಲ್ಲ ಇನ್ನೂ ಒಂದು ಕಯ್ಯ. ಅಮ್ಮಮ್ಮ ಅಂದ್ರ ಇನ್ನೂ ಒಂದು ಕಯ್ಯ ............... ಹದಿನಾರ ಕಿತ್ತರುಡ ಕುಡಿಯಾಕ ? ಅದೂ ಹದ್ನಾರ?' ಎಲ್ಲನುವಿ ನಿಮ್ಮೆದ್ರುಗ ಕುಡುದ್ರ ಒಪ್ಪಗಂಡರಪ್ಪ ಆಗ್ತಾರುವಿ ?"೧೭

ಗಾರಸಿದ್ ಮಾವನ ಈ ಪಂದ್ಯ ಸವರ್ಣೀಯರಲ್ಲಿ ದಿಗಿಲನ್ನು ಹುಟ್ಟಿಸುತ್ತದೆ. ಈ ಪಂದ್ಯವೇನಾದರೂ ಏರ್ಪಟ್ಟರೆ ಅದರಲ್ಲಿ ಗಾರಸಿದ್‌ಮಾವ ಜಯಗಳಿಸುತ್ತಾನೆ ಎಂಬದು ಸ್ಪಷ್ಟವಾಗಿ ಸವರ್ಣೀಯರಿಗೆ ತಿಳಿದಿದೆ. ಅದಕ್ಕಾಗಿ ಅವರು ಮಾತನ್ನು ಬದಲಿಸುತ್ತಾರೆ. ಹೀಗೆ ಅನಾಗರಿಕವಾಗಿ ಅವನನ್ನು ಥಳಿಸುತ್ತಿರುವುದನ್ನು ದಲಿತ ಮುಖಂಡ ನಾಗರಾಜ್ ರವರು ಖಂಡಿಸುತ್ತಾರೆ. ಇಬ್ಬರದು ತಪ್ಪು ಎಂದು ತೀರ್ಮಾನಿಸುವ ನಾಗರಾಜು ಇಬ್ಬರೂ ನೂರ ಒಂದು ರೂಪಾಯಿ ದಂಡ ಕಟ್ಟಬೇಕೆಂದು ತೀರ್ಮಾನಿಸುತ್ತಾನೆ. ಆಗಿನ ಸಂದರ್ಭದ ಗಾರಸಿದ್ ಮಾವನ ಚಾಣಾಕ್ಷತನ ಹೀಗಿದೆ. "ತನ್ನ ಜುಬ್ಬದ ಜೋಬ ಅಲುಗಾಡುಸ್ತ ನೂರೊಂದು ರೂಪಾಯಿ ತಗ್ದು 'ಈಗ ತಕ್ಕಯ್ಯ ಮೇಷ್ತ್ರ ನಮ್ಮುಡ ತಪ್ಪ........ಅವನ ತಪ್ಪನೂ ಮಡುಗ್ಸುಬುಡು ಮತ್ತ. ಈಗ ಎಲ್ರೂಗೂವಿ ಒಂದೇ ತಾನೇಯ ನ್ಯಾಯ......' ಈ ದರೆಗೆ ಬಿದ್ದಾ ಆ ಗಳುಗೆ ದೆಸವೋ ಏನೋ ಒಂದು ಗಳುಗಾರೂ ಸುಮ್ಮಗಿರದ

ಗಾರಸಿದ್ ಮಾವನು ಮೊಕಂಡನ ಬೆಳತುದಿಲಿ ನಾಗರಾಜು ಮೊಕದ ಮುಂದಲ್ಲಿ ಬೀಟೋ ಥರ್‍ವಾಗಿ ಆಡ್ತಿದ್ದ ನೋಟ್ಗಳ ತಟ್ಕನ ತನ್‌ಕಯ್ಗ ಚಿಮ್ಮಸ್ಗಂಡು, ಒಂದ್ ರೂಪಾಯಿ ತನ್ನ ಬೆರಳೊಳ್ಗ ಕಾಣ್ದಂಗ ಮಾಡಿ, ನೂರ್ ರೂಪಾಯಿ ಆ ಮೊಕಂಡನ ಮುಂದಿಟ್ಟು ' ತಕಪ್ಪ ಈಗ ನನ್ ಪಾಲ್ನ ತಪ್ಪ. ಉಳುಕ ಒಂದು ರೂಪಾಯ ಆಮ್ಯಾಕ್ ಕೊಡ್ತೀನಿ. ನಂಗ ನೂರು ಸಾಲ ಕೊಟ್ರ ಅಂದ್ಕಳ್ಳಿ. ನಿಮ್ ಪಾಲ್ನ ತಪ್ಪ ನೂರೊಂದ ನೀವ್ ಬ್ಯಾರಿಯಾಗಿ ಮಠಕ್ಕೆ ಕಟ್ಗಳ್ಳಿ.....'ಅಂದು ನಾಗರಾಜಾದಿಯಾಗಿ ಆ ಗುಂಪುಗ ಬೆರಗು ಬಡಿಸಿದನು"೧೬ ಇದು ದಲಿತರ ಅಸಹಾಯಕ ಸ್ಥಿತಿಯನ್ನು ಚಿತ್ರಿಸುತ್ತದೆ. ತಪ್ಪು ಮಾಡಿ ಸಿಕ್ಕಿಹಾಕಿಕೊಂಡರು ಅದನ್ನು ಚಾಣಾಕ್ಷತನದಿಂದ ಹೆದರಿಸುವ ವಿಶಿಷ್ಟ ಗುಣವನ್ನು ದಲಿತ ಪಾತ್ರಗಳು ಹೊಂದಿರುವುದನ್ನು ಮೇಲಿನ ಘಟನೆ ಹೇಳುತ್ತದೆ. ಕಾದಂಬರಿಯ ಗಾರಸಿದ್ಮಾವನಿಗೆ ಕಳ್ಳತನ ಅಪರಾಧ ಎಂಬ ಭಾವ ಸ್ವಲ್ಪವು ಇಲ್ಲದಿರುವುದು ಆಶ್ಚರ್ಯವನ್ನು ಉಂಟು ಮಾಡುತ್ತದೆ. ಕುವೆಂಪು ಕಾದಂಬರಿಗಳ ದಲಿತ ಪಾತ್ರಗಳು ತಮ್ಮ ಒಡೆಯರ ಎದುರು ಮಾತನಾಡುವುದಿರಲಿ, ಎದುರು ನಿಲ್ಲಲು ಸಹ ಆ ಪಾತ್ರಗಳಿಗೆ ಧೈರ್ಯ ವಿಲ್ಲ. ದಲಿತ ಸಾಹಿತ್ಯ ರಚನೆಯಾಗುವ ಸಂದರ್ಭಕ್ಕೆ ಕೆಲವು ವಿದ್ಯಾವಂತ ಯುವಕರು ಕಾನೂನಿನ ಜ್ಞಾನವನ್ನು ಪಡೆದುಕೊಂಡಿದ್ದರು. ತಮ್ಮ ರಕ್ಷಣೆಗೆ ಕಾನೂನಿನ ಸಹಾಯವಿದೆ ಎಂಬುದು ಅವರ ನಂಬಿಕೆಯಾಗಿತ್ತು.

ಕುವೆಂಪು ಮತ್ತು ದಲಿತ ಕಾದಂಬರಿಗಳಲ್ಲಿ ದಾಖಲಾಗಿರುವ ಹಲವು ಸಮಸ್ಯೆಗಳ ಸಾಮ್ಯಭಿನ್ನತೆಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ಗುರುತಿಸಬಹುದು.

ಕುವೆಂಪು ಕಾದಂಬರಿಗಳಲ್ಲಿ ದಲಿತರು ಜೀತ ಪದ್ಧತಿ, ಜಾತಿ ಪದ್ಧತಿ, ಉಳಿಗಮಾನ್ಯ ಪದ್ಧತಿಯ ಕ್ರೌರ್ಯ ಇವೆಲ್ಲವನ್ನು ಮೂಕವಾಗಿ ಸಹಿಸುತ್ತಿದ್ದಾರೆ. ಇವರಿಗೆ ಪ್ರತಿರೋಧ ತೋರುವ ಶಕ್ತಿ ಇಲ್ಲ. ಇಲ್ಲಿ ದಾಖಲಾಗಿರುವ ದಲಿತ ಪಾತ್ರಗಳೆಲ್ಲವೂ ಅವಿದ್ಯಾವಂತರವು. ಸೇಸಿಯ ಪ್ರಕರಣವೊಂದನ್ನು ಬಿಟ್ಟರೆ ಉಳಿದ ಯಾವ ದಲಿತ ಪಾತ್ರಗಳು ಭೂಮಾಲಿಕರನ್ನು ಪ್ರಶ್ನಿಸುವುದಿಲ್ಲ. ಮತಾಂತರದ ಬಗ್ಗೆ ದಲಿತರಿಗೆ ವಿಶ್ವಾಸವಿಲ್ಲ. ಸಾಬರು, ಕ್ರಿಶ್ಚಿಯನ್‌ರು ಇವರುಗಳು ತಮ್ಮ ಜಾತಿಗಿಂತಲೂ ಕೆಳಗಿನವರು ಎಂಬ ಅಭಿಪ್ರಾಯ ದಲಿತರಲ್ಲಿದೆ. ಕುವೆಂಪುರವರು ಅಸ್ಪೃಶ್ಯರು ಮತ್ತು ಶೂದ್ರರರು ಮತಾಂತರದ ಪ್ರಬಾವಕ್ಕೆ ಒಳಗಗಾದಂತೆ ಎಚ್ಚರ ವಹಿಸಿದ್ದಾರೆ. ನವೋದಯದ ಹೆಚ್ಚಿನ ಕಾದಂಬರಿಗಳು ಭೂಮಾಲಿಕರ ಮತ್ತು ಜೀತಗಾರರ ನಡುವಿನ ಸಂಪ್ರದಾಯಿಕವಾದ ಅಮಾನವೀಯ ಸಂಬಂಧಗಳನ್ನು ಚಿತ್ರಿಸುತ್ತವೆ. ಕುವೆಂಪು ಕಾದಂಬರಿಗಳು ಮಾನವೀಯ ಸಂಬಂಧಗಳ ಜೊತೆಗೆ ಕೆಲವು ಅಮಾನವೀಯ ಚಿತ್ರಣಗಳನ್ನು ಸಹ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ದಲಿತ ಕಾದಂಬರಿಗಳಲ್ಲಿ ಹಿರಿಯ ತಲೆಮಾರಿನ ದಲಿತ ಸಮುದಾಯದವರು ಅಸ್ಪೃಶ್ಯತೆಗೆ ತಲೆಬಾಗಿದ್ದಾರೆ. ಹೊಸ ಪೀಳಿಗೆಯ ಯುವಕರಲ್ಲಿ ಪ್ರಗತಿಪರ ಚಿಂತನೆಯ ಫಲವಾಗಿ ಅವರು ಅಸ್ಪೃಶ್ಯತೆಯನ್ನು ವಿರೋಧಿಸುತ್ತಾರೆ. ದಲಿತ ವರ್ಗದ ಯುವಕರು ಗ್ರಾಮೀಣ ಪರಿಸರದಲ್ಲಿ ಸಮಾನತೆಯನ್ನು ಜ್ಞಾನದಿಂದ ಹಾಗೂ ತೋಳ್ಬಲದಿಂದ ಗಳಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ದಲಿತ ಕಾದಂಬರಿಗಳಲ್ಲಿ ನೋಡಬಹುದು. ಶತಮಾನಗಳಿಂದ ತಮ್ಮ ಸ್ತ್ರೀಯರ ಮೇಲಾಗುತ್ತಿರುವ ಲೈಂಗಿಕ ಶೋಷಣೆಯನ್ನು ಕುರಿತಾದ ವಿರೋಧ ಈ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಲೈಂಗಿಕ ಅಥವಾ ವಿವಾಹೇತರ ಸಂಬಂಧಗಳು ಇಲ್ಲಿ ಎರಡು ರೀತಿಯಲ್ಲಿ ದಾಖಲಾಗಿವೆ. ಒಂದು ಸೇಡಿನ ಪ್ರತೀಕಾರದ ಭಾವದಲ್ಲಿ ಮೂಡಿಬಂದಿದ್ದರೆ. ಮತ್ತೊಂದು ಗಂಡು ಹೆಣ್ಣಿನ ಸಹಜ ಅಕರ್ಷಣೆಯ ಮೂಲಕ ಲೈಂಗಿಕ ಸಂಬಂಧಗಳು ಏರ್ಪಟ್ಟಿರುವುದನ್ನು ನೋಡಬಹುದು. ಗ್ರಾಮೀಣ ನ್ಯಾಯ ವ್ಯವಸ್ಥೆಯಲ್ಲಿ ಅಥವಾ ಸಂಪ್ರದಾಯಿಕ ನ್ಯಾಯ ವ್ಯವಸ್ಥೆಯಲ್ಲಿ ದಲಿತರಿಗೆ ನ್ಯಾಯ ದೊರಕಲಾರದು ಎಂಬ ಭಾವನೆ ದಲಿತರಲ್ಲಿ ವ್ಯಕ್ತವಾಗಿದೆ. ಇವರಿಗೆ ಆಧುನಿಕ ನ್ಯಾಯ ವ್ಯವಸ್ಥೆಯಲ್ಲಿ ನಂಬಿಕೆ ಇರುವುದನ್ನು ಹಲವು

ಸನ್ನಿವೇಶಗಳು ನಿರೂಪಿಸುತ್ತವೆ. ದಲಿತರನ್ನು ಮನಸೋ ಇಚ್ಛೆ ದಂಡಿಸುವ ಪ್ರಕ್ರಿಯೆ ದಲಿತ ಸಾಹಿತ್ಯದ ಸಂದರ್ಭದಲ್ಲಿ ಇಲ್ಲವಾಗಿದೆ. ಏಕೆಂದರೆ ದಲಿತ ಯುವಕರು ಪ್ರಜ್ಞಾವಂತ ಸ್ಥಿತಿಯಲ್ಲಿದ್ದು ಇಂತಹ ಶೋಷಣೆಗಳನ್ನು ಖಂಡಿಸಲು ಅನೇಕ ಸಂಘಟನೆಗಳನ್ನು ಮಾಡಿಕೊಂಡಿದ್ದಾರೆ. ವಿಶೇಷವಾಗಿ ಇವರಿಗೆ ಇರುವ ಕಾನೂನಿನ ಸೌಲಭ್ಯವನ್ನು ಪಡೆದುಕೊಂಡು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ದಲಿತ ಕಾದಂಬರಿಗಳಲ್ಲಿ ಕಾಣಬಹುದು.

## ಉಲ್ಲೇಖಗಳು :


೧ ದೇವನೂರ ಮಹದೇವ : ಒಡಲಾಳ (ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು, ೧೯೭೯) ೨೯.

೨. ಮುಳ್ಳೂರು ನಾಗರಾಜ : ಮರಣಮಂಡಲ ಮಧ್ಯದೊಳಗೆ ( ಹೊಸದಿಕ್ಕು ಪ್ರಕಾಶನ, ಬೆಂಗಳೂರು ೧೯೮೬) ೯೭,೯೮

೩. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೫೧೯

೪. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು,೧೯೯೨) ೫೦೬

೫. ಮುಳ್ಳೂರು ನಾಗರಾಜ : ಮರಣಮಂಡಲ ಮಧ್ಯದೊಳಗೆ ( ಹೊಸದಿಕ್ಕು ಪ್ರಕಾಶನ, ಬೆಂಗಳೂರು, ೧೯೮೬) ೫೨

೬. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೨೧೧

೭. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೧೧೭

೮. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೧೫೮

೯. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೨೩೩

೧೦. ದೇವನೂರ ಮಹದೇವ : ಕುಸುಮಬಾಲೆ (ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು, ೧೯೮೮) ೧೫.

೧೧. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೩೩೯

೧೨. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೩೩೮

೧೩. ದೇವನೂರ ಮಹದೇವ : ಕುಸುಮಬಾಲೆ (ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು.೧೯೮೮) ೬೮.

೧೪ ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೧೩

೧೫. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೧೫

೧೬. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೪೭೩

೧೭. ದೇವನೂರ ಮಹದೇವ : ಕುಸುಮಬಾಲೆ (ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು. ೧೯೮೮) ೪೦

೧೮. ದೇವನೂರ ಮಹದೇವ : ಕುಸುಮಬಾಲೆ ( ಸಂಗಾತಿ ಸಹಕಾರಿ ಪ್ರಕಾಶನ, ಬೆಂಗಳೂರು. ೧೯೮೮)೪೨

## ಕುವೆಂಪು ಅವರ ಕಾದಂಬರಿಗಳಲ್ಲಿನ ದಲಿತ ಪ್ರಜ್ಞೆ – 'ಕಾದಂಬರಿಕಾರರ ದೃಷ್ಟಿಕೋನ'

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸೃಜನಶೀಲ ಸಾಹಿತ್ಯ ಮತ್ತು ವಿಮರ್ಶೆ ಇವೆರಡು ಪರಸ್ಪರ ಕೊಡು-ಕೊಳ್ಳುವಿಕೆಯ ಪ್ರಕ್ರಿಯೆಯಲ್ಲಿ ಚಲಿಸುತ್ತಿರುತ್ತವೆ. ಕುವೆಂಪು ಸಾಹಿತ್ಯ ಈ ನಿಟ್ಟಿನಲ್ಲಿ ಇಂದಿನವರೆಗೂ ಚರ್ಚಿತವಾಗುತ್ತಿವೆ. ವಿಮರ್ಶಕರು ಕುವೆಂಪುರವರ ಎರಡು ಕಾದಂಬರಿಗಳನ್ನು ವಿವಿಧ ಆಯಾಮಗಳಿಂದ ಇಂದಿನವರೆಗೂ ವಿಮರ್ಶೆಗೆ ಗುರಿಪಡಿಸಿರುವುದನ್ನು ಕಾಣಬಹುದು. ಕುವೆಂಪುರವರು ಕನ್ನಡ ಸಾಹಿತ್ಯದ ಮೊಟ್ಟಮೊದಲ ಬಂಡಾಯಗಾರರು ಅವರಷ್ಟು ನೇರವಾಗಿ ಹಿಂದೂ ಧಾರ್ಮಿಕ ನೀತಿಯನ್ನು ಉಳಿಗಮಾನ್ಯ ವ್ಯವಸ್ಥೆಯ ಕ್ರೂರ ಆಚರಣೆಗಳನ್ನು ಖಂಡಿಸಿದ ಬರಹಗಾರರು ಕನ್ನಡ ಸಾಹಿತ್ಯದಲ್ಲಿ ಇಲ್ಲ ಎಂದರೆ ತಪ್ಪಾಗಲಾರದು. ಬಿಳಮನೆ ರಾಮದಾಸ್ ತೇಜಸ್ವಿ ಮುಂತಾದ ಪ್ರಮುಖ ಲೇಖಕರು ಮಲೆನಾಡಿನ ಭೂಮಾಲಿಕರ ಕ್ರೌರ್ಯ, ಶೋಷಣೆಯ ಬಗ್ಗೆ ಬರೆದಿದ್ದಾರೆ. ಆದರೆ ಇವರ ಬರಹಗಳು ಕುವೆಂಪು ಬರಹಗಳಷ್ಟು ವಿವಾದಾಸ್ವದವಾಗಿಲ್ಲ. ಕುವೆಂಪುರವರು ತಮ್ಮ ಬಂಡಾಯದ ವಿಚಾರಗಳನ್ನು ವೈಚಾರಿಕ ಬರಹಗಳಲ್ಲಿ, ಭಾಷಣಗಳಲ್ಲಿ ಈ ಅಂಶವನ್ನು ಗುರುತಿಸಬಹುದು. ಇಂತಹ ಬಂಡಾಯದ ಧ್ವನಿ ಹಾಗೂ ವೈಚಾರಿಕ ದೃಷ್ಟಿಕೋನಗಳನ್ನು ಕುವೆಂಪುರವರು ತಮ್ಮ ಎರಡು ಕಾದಂಬರಿಗಳಲ್ಲಿಯು ದಾಖಲಿಸಿದ್ದಾರೆ. ಮೂಢನಂಬಿಕೆ ಅನಾಗರಿಕತೆಯಿಂದ ಮೇಲ್ಜಾತಿಯವರ ಶೋಷಣೆಯನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಖಂಡಿಸಿದ್ದಾರೆ. ಮೂಢನಂಬಿಕೆ, ಜಾತಿತಾರತಮ್ಯ ಇವುಗಳ ನಾಶಕ್ಕಾಗಿ ಹಾಗೆಯೇ ಸಮಾಜದಲ್ಲಿ ಸಮಾನತೆಯನ್ನು ಸ್ಥಾಪಿಸುವ ಉದ್ದೇಶವನ್ನು ಇವರ ಕಾದಂಬರಿಗಳು ಹೊಂದಿರುವ ಅಂಶವನ್ನು ಓದುಗರು ಗಮನಿಸಬಹುದು. 'ಜೀವನವೆಲ್ಲಾ ಸಾಧನೆ' ಎಂದು ಕಾಗೂರು ಹೆಗ್ಗಡತಿ ಕಾದಂಬರಿ ಹೇಳಿದರೆ 'ಜೀವನದಲ್ಲಿ ಶೋಧನೆ'ಎಂಬ ಆಶಯವನ್ನು ಮದುಮಗಳು ಕಾದಂಬರಿ ಹೊಂದಿದೆ. ಎಂಬ ಕೆ. ಎಸ್. ಭಗವಾನ್‌ರವರ ಹೇಳಿಕೆ ಸಮಂಜಸವಾಗಿದೆ. ಮದುಮಗಳು ಕಾದಂಬರಿ ಹಿಂದೂ-ಕ್ರಿಶ್ಚಿಯನ್ ಧರ್ಮಗಳಲ್ಲಿನ ಭಿನ್ನಭಿಪ್ರಾಯಗಳನ್ನು ಮೇಲ್ವರ್ಗ ಮತ್ತು ಕೆಳ ವರ್ಗದವರ ಜೀವನ ವಿಧಾನ, ಶೋಷಣೆಯ ಮುಖಗಳನ್ನು, ದಲಿತರ ಜೀವನ ಕ್ರಮವನ್ನು ಚಿತ್ರಿಸುತ್ತದೆ.

ಕುವೆಂಪುರವರ ಕಾದಂಬರಿಗಳಲ್ಲಿ ಬಳಕೆಯಾಗಿರುವ ವಸ್ತು, ಭಾಷೆ, ವಿಶಿಷ್ಟ ಬಗೆಯದಾಗಿದೆ. ಇಲ್ಲಿ ದಾಖಲಾಗಿರುವ ಜೀವ ವೈವಿದ್ಯ, ಪರಿಸರ, ಇವುಗಳ ವರ್ಣನೆ ಶಕ್ತಿಯುತವಾಗಿ ಮಾಡಿಬಂದಿದೆ. ಇವರ ಒಂದೊಂದು ಕಾದಂಬರಿಯು ಒಂದೊಂದು ಪ್ರಪಂಚದಂತೆ ವಿಶಾಲ ವ್ಯಾಪ್ತಿಯನ್ನು ಒಳಗೊಂಡಿವೆ. ಕಾಗೂರು ಹೆಗ್ಗಡಿತಿ ಕಾದಂಬರಿ ಮಲೆನಾಡಿನ ಒಕ್ಕಲಿಗ ಸಮುದಾಯದ ಕ್ರೌರ್ಯ, ಶೋಷಣೆ ಇವುಗಳ ಸಮಗ್ರ ನೋಟವನ್ನು ಪರಿಚಯಿಸುತ್ತದೆ. ಎರಡನೆ ಕಾದಂಬರಿ ಮಲೆನಾಡಿನ ಪರಿಸರದ ಚಿತ್ರಣ ಅದಕ್ಕೆ ಪೂರಕವಾಗಿ ಇತರೆ ಸಮುದಾಯದ ಜನ ಜೀವನವನ್ನು ಪರಿಚಯಿಸುತ್ತದೆ. ಇಲ್ಲಿ ಸಾಮಾನ್ಯ ಮನುಷ್ಯನಿಂದ ಹಿಡಿದು ಮಾನವೀಯತೆಯ ಉತ್ತುಂಗ ಶಿಖರಕ್ಕೇರಿದ ಅದ್ಯಾತ್ಮ ಸಾಧಕನವರೆಗೆ ಕುವೆಂಪುರವರ ಪಾತ್ರ ಚಿತ್ರಣ ಸಾಗಿದೆ ಹಾಗೆಯೇ ಬಡತನದಿಂದ ಬಳಲುವ ಬಡವನಿಂದ ಹಿಡಿದು ಸುಖಸಾಗರದಲ್ಲಿ ತೇಲಾಡುವ ಭೂಮಾಲಿಕನವರೆಗೂ ಅವರ ಪಾತ್ರ ಚಿತ್ರಣ ಚಿತ್ರಿತವಾಗಿದೆ. ಇವರ ಕಾದಂಬರಿಗಳಲ್ಲಿ ಮನುಷ್ಯ ಜಗತ್ತು ಮಾತ್ರವಲ್ಲದೆ ಮಲೆನಾಡಿನ ಪ್ರಾಣಿ-ಪಕ್ಷಿಗಳ ಸಂಪೂರ್ಣ ಪರಿಚಯ ಮಾಡಿಕೊಟ್ಟಿದ್ದಾರೆ. ಆಡು, ಧನ, ಹಂದಿ, ಕೋಳಿ ಮುಂತಾದ ಜಂತುಗಳು ಕಾದಂಬರಿಗಳಲ್ಲಿ ಸ್ಥಾನ ಪಡೆದಿವೆ. ಇಲ್ಲಿ ಚಿತ್ರಿತವಾಗಿರುವ ಜೀವ ಸಂಕುಲಗಳು ಕನ್ನಡದ

ಬೇರೆ ಯಾವ ಕಾದಂಬರಿಯಲ್ಲಿಯು ಚಿತ್ರಿತವಾಗಿಲ್ಲ ಎಂದರೆ ತಪ್ಪಾಗಲಾರದು. ಹಾಗೆಯೇ ಈ ಕಾದಂಬರಿಗಳಲ್ಲಿನ ವಿಚಾರಗಳು ಅದು ದಲಿತ ಪಾತ್ರ ಚಿತ್ರಣದ ಅಪವಾದಗಳಿರಬಹುದು ಅಥವಾ ಉಳಿಗಮಾನ್ಯ ವ್ಯವಸ್ಥೆಯ ಕ್ರೂರ ಆಚರಣೆಗಳನ್ನು ಕುರಿತಾದ ಕಾದಂಬರಿಕಾರರ ಅಭಿಪ್ರಾಯಗಳಿರಬಹುದು ಈ ವಿಚಾರಗಳು ವಿಮರ್ಶವಲಯದಲ್ಲಿ ಇಂದು ಚರ್ಚಿತವಾಗುತ್ತಿರುವಷ್ಟು ವ್ಯಾಪಕವಾಗಿ ಬೇರೆ ಯಾವ ಕನ್ನಡ ಕಾದಂಬರಿಯ ವಿಚಾರಗಳು ಚರ್ಚಿತವಾಗುತ್ತಿಲ್ಲ.

ಹೊಗನ್ನಡ ಸಾಹಿತ್ಯ ವಿಮರ್ಶೆ ಹಲವಾರು ದೃಷ್ಟಿಕೋನಗಳನ್ನು ಒಳಗೊಂಡಿದೆ. ಭಾರತದ ಸಂಪ್ರದಾಯ ಬದ್ಧವಾದ ಧಾರ್ಮಿಕ ನೀತಿಯನ್ನಿಟ್ಟುಕೊಂಡು ಸಾಹಿತ್ಯವನ್ನು ವಿಮರ್ಶಿಸುವ ಪದ್ಧತಿಯನ್ನು ವಿಮರ್ಶಾವಲಯಲ್ಲಿ ಕಾಣಬಹುದು. ಪ್ರಸ್ತುತ ಸಂದರ್ಭದಲ್ಲಿ ವಿಮರ್ಶೆ ಎಂದರೆ ಅದು ಕೃತಿ ವಿಮರ್ಶೆಯಾಗಿರದೆ. ಲೇಖಕನ ವಿಮರ್ಶೆಯಾಗಿರುವುದು ವಿಪರ್ಯಾಸ. ಲೇಖಕನು ಯಾವ ಜಾತಿಗೆ ಸೇರಿದವನು ಎಂಬುದನ್ನು ಆದರಿಸಿ ಆತನ ಕೃತಿಯನ್ನು ವಿಮರ್ಶೆಗೆ ಗುರಿ ಪಡಿಸಲಾಗುತ್ತಿದೆ. ಮತ್ತೊಂದೆಡೆ ಹಲವಾರು ವಿಮರ್ಶೆಯ ದೃಷ್ಟಿಕೋನಗಳು ಕನ್ನಡ ಸಾಹಿತ್ಯದಲ್ಲಿ ಚಲಾವಣೆಯಲ್ಲಿ ಇವೆ. ಈ ವಿಮರ್ಶೆಯ ಪದ್ಧತಿಗಳು ತಮ್ಮದೇ ಆದ ನೀತಿ–ನಿಯಮಗಳನ್ನು ವಿಮರ್ಶ ಸಂದರ್ಭದಲ್ಲಿ ಒಳಗೊಂಡಿವೆ. ರಸಾನಂದದ ಹೆಸರಿನಲ್ಲಿ ಉದ್ಗಾರಗಳ ರಸ ವಿಮರ್ಶೆ ಇದೆ. ಅದೇ ರೀತಿ ಶುದ್ಧಕಲೆ ಮತ್ತು ಶುದ್ಧ ಸಾಹಿತ್ಯದ ಹೆಸರಿನಲ್ಲಿ ಪದಗಳ ಮೋಡಿ ಮಾಡುವ ಪ್ರಾಯೋಗಿಕ ವಿಮರ್ಶೆಯಂಥಾ ಮಾನದಂಡಗಳನ್ನು ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಒಳಗೊಂಡಿರುವುದು ಗುರುತಿಸಬಹುದು. ಇಂತಹ ವಿಧಾನಗಳನ್ನು ಹಾಗೂ ವಿಮರ್ಶೆಯ ಸಂದರ್ಭದಲ್ಲಿ ಬಳಸುವ ಪೂರ್ವಗ್ರಹಗಳನ್ನು ಕುರಿತಾದ ವಿ. ಎಂ. ಇನಾಂದರ್‌ರವರ ಅಭಿಪ್ರಾಯ ಕೆಳಗಿನಂತಿದೆ.

"........ದೊಷಾನ್ವೇಷಣೆ ವಿಮರ್ಶೆಯ ಕೆಲಸವಲ್ಲ. ಹಾಗೆಯೇ ಬರೆದವರನ್ನು ಹೊಗಳುವುದಾಗಲೀ. ತೆಗಳುವುದಾಗಲಿ ಎರಡು ವಿಮರ್ಶೆ ಮಾಡಬೇಕಾದ ಕೆಲಸಗಳಲ್ಲ. ಹೊಗಳಿಕೆ ತೆಗಳಿಕೆಗಳಾಚೆಯಲ್ಲಿ ವಿಮರ್ಶೆ ಕಾರ್ಯ ನಡೆಯಬೇಕಾಗುತ್ತದೆ. ಇಂದು ನಮ್ಮಲ್ಲಿ ಅದು ವಿಮರ್ಶೆ ಹೆಸರಿನ ಬರೆಹ ಹೊಗಳಿಕ ತೆಗಳಿಕೆಗಳಲ್ಲಿ ತೊಡಗಿರುತ್ತದೆ. ಎಂದರೆ ಅದು ವಿಮರ್ಶೆಯ ತಪ್ಪಲ್ಲ. ಅದು ವಿಮರ್ಶಕರೆಂದುಕೊಳ್ಳುವವರ ಸಂಕುಚಿತ ದೃಷ್ಟಿ ಎನ್ನಬೇಕಾಗುತ್ತದೆ. ನಾನೆಂದುಕೊಂಡಹಾಗೆ ನಿಜವಾದ ವಿಮರ್ಶೆ ತನ್ನೆದುರಿಗೆ ಬಂದ ಕಲಾಕೃತಿಯೊಂದನ್ನು ಯಾವ ಪೂರ್ವಗ್ರಹಗಳು ಇಲ್ಲದೆ ಸ್ವೀಕರಿಸುತ್ತದೆ. ಸ್ವೀಕರಿಸಿಕೊಂಡ ಕೃತಿಯನ್ನು ಅರ್ಥವಿಸಿಕೊಳ್ಳುತ್ತದೆ. ಆ ಅರ್ಥದ ಬೆಳಕಿನಲ್ಲಿ ಯಾವುದನ್ನು ಹೆಳುವುದಕ್ಕೆಂದು ಅದನ್ನು ಬರೆದವ ಯತ್ನಿಸಿರುತ್ತಾನೆಯೊ ಅ ಯತ್ನದ ಯಶಸ್ಸನ್ನು ಸಾರ್ಥಕತೆಯನ್ನು ಅಥವಾ ಅಸಮರ್ಪಕತೆಯನ್ನು ಅಥವಾ ಸೋಲನ್ನು ಗುರುತಿಸಿ ಅದನ್ನು ವಿವರಿಸುವುದು ವಿಮರ್ಶೆಯ ಕೆಲಸ. ಕೃತಿಯ ವಿಮರ್ಶೆ ಈ ದಾರಿಯಲ್ಲಿ ನಡೆದಾಗ ಹೊಗಳಿಕೆ ತೆಗಳಿಕೆಗಳೆರಡೂ ಅಪ್ರಸ್ತುತವಾಗುತ್ತವೆ. ಕೃತಿಯಲ್ಲಿ ದೋಷಗಳಿವೆಯೇ ಅಥವಾ ಇಲ್ಲವೆ ಎನ್ನುವುದಕ್ಕಿಂತ ಆ ಕೃತಿ ಸಾಧಿಸಬೇಕೆಂದದ್ದೂ ಏನನ್ನು, ಅದನ್ನು ಎಷ್ಟರ ಮಟ್ಟಿಗೆ ಸಾಧಿಸಿದೆ. ಪೂರ್ತಿಯಾಗಿ ಸಾಧಿಸಲಾಗಿರದಿದ್ದರೆ ಅದು ಯಾವ ಕಾರಣಗಳಿಗಾಗಿ ಎನ್ನುವ ಪ್ರಶ್ನೆಗಳೇ ಮಹತ್ವದಾಗುತ್ತವೆ. ಯಾವುದಕ್ಕೂ ಕೃತಿಯೇ ಆಧಾರವಾಗಬೇಕಾಗುತ್ತದೆ."[೧] ಈ ಹೇಳಿಕೆ ಪ್ರಾಮಾಣಿಕ ವಿಮರ್ಶೆಯ ಬಗ್ಗೆ ಬೆಳಕು ಚೆಲ್ಲುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಚಾಲನೆಯಲ್ಲಿ ಇರುವ ವಿಮರ್ಶೆ ಪದ್ಧತಿಯನ್ನು ಮೇಲಿ ಹೇಳಿಕೆ ಖಂಡಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ಬೆಳೆಯಬೇಕಾದ ಪ್ರಗತಿಪರ ಆಶಯವನ್ನು ಮೇಲಿ ಹೇಳಿಕೆ ಒಳಗೊಂಡಡಿರುವುನ್ನು ಕಾಣಬಹುದು. ಈ ನಿಟ್ಟಿನಲ್ಲಿ ವಿಮರ್ಶೆಯ ಪರಿಕಲ್ಪನೆ ಬೆಳೆಯಬೇಕಾಗಿದೆ.

ಕುವೆಂಪುರವರ ಕಾದಂಬರಿಗಳನ್ನು ಕುರಿತಾದ ವಿಮರ್ಶೆಗಳನ್ನು ಮುಖ್ಯವಾಗಿ ಎರಡು ವಿಭಾಗಗಳಲ್ಲಿ ನೋಡಬಹುದು.

೧. ಒಂದು ಕೃತಿ ಮತ್ತೊಂದಕ್ಕಿಂತ ಶ್ರೇಷ್ಠವಾಗಿದೆ. ಎಂಬ ನವ್ಯ ಮಾದರಿಯ ವಿಮರ್ಶೆ. ೨. ಕುವೆಂಪು ಕಾದಂಬರಿಗಳನ್ನು ವಿಭಿನ್ನ ದೃಷ್ಟಿಕೋನದಿಂದ ನೋಡುವ ಸಂಸ್ಕೃತಿ ವಿಮರ್ಶೆ.

ನವ್ಯ ವಿಮರ್ಶಕರು ತಮ್ಮದೇ ಆದ ಕೆಲವು ವಿಮರ್ಶೆಯ ಮಾನದಂಡಗಳನ್ನು ಬಳಸಿಕೊಂಡು ಅಂದಿನ ಸಂದರ್ಭದ ಕೃತಿಗಳ ವಿಮರ್ಶೆ ಮಾಡುತ್ತಿದ್ದರು. ಯು. ಆರ್. ಅನಂತಮೂರ್ತಿ, ಗಿರಡ್ಡಿ ಗೋವಿಂದರಾಜು, ಕೀರ್ತಿನಾಥ ಕುರ್ತುಕೋಟಿ, ಎಂ. ಜಿ. ಕೃಷ್ಣಮೂರ್ತಿ ಮುಂತಾದ ನವ್ಯ ವಿಮರ್ಶಕರು ಕುವೆಂಪು ಸಾಹಿತ್ಯವನ್ನು ಕುರಿತಾದ ದ್ವಂದ್ವ ನಿಲುವುಗಳನ್ನು ಹೊಂದಿದ್ದರು. ಬೇಂದ್ರೆ, ಕುವೆಂಪು ಮಧ್ಯೆ ಯಾರು ಶ್ರೇಷ್ಠ ಲೇಖಕರು ಅದೇ ರೀತಿ ಕುವೆಂಪುರವರ ಕಾನೂರು ಹೆಗ್ಗಡಿತಿ ಹಾಗೂ ಮಲೆಗಳಲ್ಲಿ ಮದುಮಗಳು ಈ ಕೃತಿಗಳಲ್ಲಿ ಯಾವುದು ಶ್ರೇಷ್ಠ ಕೃತಿ ಎಂಬ ವಿಚಾರಗಳೆ ವಿಮರ್ಶೆ ಎಂದು ಅಂದಿನ ಸಂದರ್ಭದ ವಿರ್ಮಶಕರು ನಂಬಿದ್ದರು. ಕೀರ್ತಿನಾಥ ಕುರ್ತುಕೋಟಿಯವರು ಕಾನೂರು ಹೆಗ್ಗಡತಿಯ ಕಾದಂಬರಿಯನ್ನು ಆಧುನಿಕ ಭಾರತದ ಮಹಾಕಾವ್ಯವೆಂದು ಒಪ್ಪಿಕೊಂಡರೂ ಹೂವಯ್ಯನ ಪಾತ್ರದ ಬಗ್ಗೆ ಅಪಸ್ವರವನ್ನು ಎತ್ತುತ್ತಾರೆ. ಗಿರಡ್ಡಿ ಗೋವಿಂದರಾಜುರವರು ಕಾನೂರು ಹೆಗ್ಗಡಿತಿ ಕಾದಂಬರಿಯನ್ನು ಅತ್ಯಂತ ಅವೈಜ್ಞಾನಿಕವಾಗಿ ವಿಮರ್ಶಿಸಿವುದನ್ನು ಕಾಣಬಹುದು. ಅವರು ಈ ಕಾದಂಬರಿಯನ್ನು ಕುರಿತಾದ ತಮ್ಮ ಅಭಿಪ್ರಾಯವನ್ನು ಕೆಳಗಿನಂತೆ ಹೇಳಿದ್ದಾರೆ.''......... ಕಾನೂರು ಹೆಗ್ಗಡತಿಯಲ್ಲಿ ಹೂವಯ್ಯನ ಪಾತ್ರದ ಮೂಲಕ ವೈಚಾರಿಕತೆಯನ್ನು ತಂದು ಜೋಡಿಸುವ ಪ್ರಯತ್ನವೇನೋ ಇದೆ. ಆದರೆ ಅದು ಆ ಬದುಕಿಗೆ ಹೊರತಾದದ್ದು. ಅದು ಪೂರ್ತಿ ಅಸಹಜವಾಗಿ ಇಡಿಯ ಪಾತ್ರದ ಜೀವಂತತನವನ್ನೇ ಅಲ್ಲಗಳೆದಿದೆ. ಕಲಾತ್ಮಕವಾಗಿ ಹೂವಯ್ಯನ ಪಾತ್ರ ಹಾಗೂ ಅವನ ಭಾವಾತಿರೇಕದ ಆದರ್ಶವಾದ ಯಶಸ್ವಿಯಾಗಲಿಲ್ಲ ಎಂಬುದು ಈಗಾಗಲೇ ಜಗಜ್ಜಾಹೀರಾಗಿಬಿಟ್ಟಿದೆ. ''೨. ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯ ಅಂದಿನ ನವ್ಯವಿಮರ್ಶಕರ ಮನಸ್ಥಿತಿಯನ್ನು ಅವರ ಮನೋಧರ್ಮವನ್ನು ಅಭಿವ್ಯಕ್ತಿಸುತ್ತದೆ. ಕುವೆಂಪುರವರು ನವೋದಯ ಸಂದರ್ಭದ ಲೇಖಕರಾದುದದರಿಂದ ತಮ್ಮ ಕಾದಂಬರಿಗಳಲ್ಲಿ ಸಮಾಜವಾದ ಹಾಗೂ ವಾಸ್ತವವಾದಗಳನ್ನು ಒಪ್ಪಿಕೊಂಡಿದ್ದರು. ಈ ಹಿನ್ನಲೆಯಲ್ಲಿ ಅವರ ಕೃತಿಗಳ ಆಶಯವನ್ನು ಗಮನಿಸಬಹುದು. ಗಿರಡ್ಡಿ ಗೋವಿಂದರಾಜುರವರ ಅಭಿಪ್ರಾಯ ನವ್ಯರ ದ್ವಂದ್ವಾತ್ಮಕ ನಿಲುವಿಗೆ ಹಿಡಿದ ಕನ್ನಡಿಯಂತಿದೆ. ಸೃಜನಶೀಲತೆ ಇಲ್ಲದ ಯಾವುದೇ ಕೃತಿಯೂ ಜಡವಾಗುತ್ತದೆ. ಹಾಗೆಯೇ ಲೇಖನವು ಸಹ. ಈ ಕಾರಣಕ್ಕಾಗಿ ಕೃತಿಯಲ್ಲಿ ವಿಮರ್ಶಕ ಒಂದು ಏಳೆಯನ್ನು ಮಾತ್ರ ತೆಗೆದು ವಿಮರ್ಶಿಸುವುದಕ್ಕಿಂತ ಕೃತಿಯ ಸಮಗ್ರ ಸಾರ್ಥಕತೆಯ ಬಗ್ಗೆ ಹೆಚ್ಚು ಗಮನಹರಿಸಬೇಕಾದ ಅವಶ್ಯಕತೆ ಪ್ರಸ್ತುತ ಸಂದರ್ಭದಲ್ಲಿ ಇದೆ.

ಯಾವುದೇ ಸಾಹಿತ್ಯ ಕೃತಿಯು ಪರಿಪೂರ್ಣವಾದ ಸಾಹಿತ್ಯ ಕೃತಿಯಲ್ಲ ಎಂಬ ಅಂಶವನ್ನು ಕೆಲವು ವಿಮರ್ಶಕರು ಗುರುತಿಸಿದ್ದಾರೆ. ಈ ಕಾರಣಕ್ಕಾಗಿ ಕುವೆಂಪು ಕಾದಂಬರಿಗಳಲ್ಲಿ ಪರಿಪೂರ್ಣತೆಯನ್ನು ಬಯಸುವ ವಿಮರ್ಶಕರು ನಿರಾಶರಾಗಬೇಕಾಗುತ್ತದೆ. ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಬಳಸಿರುವ ವಸ್ತು, ಭಾಷೆ ಈ ವಿಚಾರಗಳಲ್ಲಿ ವಿಮರ್ಶಕರಿಗೆ ಭಿನ್ನಭಿಪ್ರಾಯಗಳಿವೆ. ಕುವೆಂಪುರವರು ಕಳೆದ ಶತಮಾನದ ಇಪ್ಪತ್ತನೇಯ ದಶಕದಿಂದ ಬರವಣಿಗೆಯನ್ನು ಪ್ರಾರಂಭಿಸಿದ್ದರು. ಅವರ ಕೃತಿಗಳನ್ನು ಕರಿತಾದ ವಿಮರ್ಶೆ ಅಂದಿನ ಸಂದರ್ಭದಲ್ಲಿ ಸಾಕಷ್ಟು ಬಂದಿರಲಿಲ್ಲ. ಕಾನೂರು ಸುಬ್ಬಮ್ಮ ಹೆಗ್ಗಡಿತಿ ಕಾದಂಬರಿ ಪ್ರಕಟವಾದ ಹದಿನೈದು ವರ್ಷಗಳ ನಂತರ ಅಂದರೆ ೧೯೫೦ ರ ಸುಮಾರಿನಲ್ಲಿ ಅವರ ಕಾದಂಬರಿಯನ್ನು ಕುರಿತಾದ ಲೇಖನವೊಂದು ಪ್ರಕಟವಾಗಿದ್ದನ್ನೂ ಜಿ. ಎಸ್. ಶಿವರುದ್ರಪ್ಪನವರು ಗುರುತಿಸುತ್ತಾರೆ.

ಎಂಬತ್ತರ ದಶಕದ ನಂತರ ಕುವೆಂಪು ಕೃತಿಗಳನ್ನು ಕುರಿತಾದ ವಿಮರ್ಶೆಗಳು ಹೊಸ ದೃಷ್ಟಿ ಕೋನದಿಂದ ಹೊಸ ಹೊಸ ಆಯಾಮದಿಂದ ನೋಡುವ ಪ್ರಕ್ರಿಯೆ ವಿಮರ್ಶಕರಲ್ಲಿ ಪ್ರಾರಂಭವಾಯಿತು. ಹೀಗೆ ಹೊಸ ದೃಷ್ಟಿಕೋನದಿಂದ ಕುವೆಂಪು ಕಾದಂಬರಿಗಳನ್ನು ನೋಡಿದ ವಿಮರ್ಶಕರಲ್ಲಿ ಡಿ. ಆರ್. ನಾಗರಾಜುರವರು **ಕುವೆಂಪು ಕಾದಂಬರಿಗಳಲ್ಲಿ ವರ್ಗ-ವರ್ಣ ಸಂಘರ್ಷ**, ಎಚ್. ಎಂ. ಚನ್ನಯ್ಯನವರ **ಕುವೆಂಪು ಸಾಹಿತ್ಯದ ಒಂದು ಪುನರ್ ವಿಮರ್ಶೆ,** ರಾಜೇಂದ್ರ ಚನ್ನಿಯವರ **ಕುವೆಂಪು ಮತ್ತು ಕನ್ನಡ ಕಾದಂಬರಿ** ರಹಮತ್ ತರೀಕೆರೆಯವರ **ಕುವೆಂಪು ಕಾದಂಬರಿಗಳಲ್ಲಿ ಸಂಘರ್ಷದ ಸ್ವರೂಪ** ರಾಜಾರಾಮ ಹೆಗ್ಗಡೆಯವರ **ಕುವೆಂಪು ಕಾದಂಬರಿಗಳಲ್ಲಿ ವಸಾಹತು ಶಾಹಿ ಅನುಭದ ಸ್ವರೂಪ** ಕೆ. ವಿ. ಸುಬ್ಬಣ್ಣನವರ **ಕುವೆಂಪುಗೆ ಪುಟ್ಟ ಕನ್ನಡಿ** ಎಲ್. ಸಿ. ಸುಮಿತ್ರರವರ **ಮಲೆನಾಡ ಸಂಸ್ಕೃತಿಯ ವಿಕಾಸದ ಕತೆಯಾಗಿ ಕುವೆಂಪು** ಹಾಗೂ ಧರಣೀದೇವಿ ಮಾಲಗತ್ತಿಯವರ **ಕುವೆಂಪು ಸಾಹಿತ್ಯದಲ್ಲಿ ದಮನಿತವಾದದ ಸುಳಿವುಗಳು** ಎಂಬ ಲೇಖನಗಳಲ್ಲಿ ಕುವೆಂಪುರವರ ಕಾದಂಬರಿಗಳನ್ನು ಕುರಿತಾದ ಹೊಸ ಹೊಸ ವಿಮರ್ಶ ದೃಷ್ಟಿಕೋನಗಳನ್ನು ಗುರುತಿಸಬಹುದು. ಮೇಲಿನ ವಿಮರ್ಶನ ಲೇಖನಗಳು ಕುವೆಂಪು ಕಾದಂಬರಿಗಳಲ್ಲಿನ ಕಾದಂಬರಿಕಾರರ ದೃಷ್ಟಿಕೋನವನ್ನು ಅವರ ಆಶಯವನ್ನು ಪ್ರಾಮಾಣಿಕವಾಗಿ ವಿಮರ್ಶಿಸುವ ಪ್ರಯತ್ನವನ್ನು ಮೇಲಿನ ವಿಮರ್ಶಕರು ಮಾಡಿದ್ದಾರೆ.

ಇದೇ ರೀತಿ ಇನ್ನೂ ಹಲವು ವಿಮರ್ಶಕರು ಕುವೆಂಪು ಕಾದಂಬರಿಗಳಲ್ಲಿನ ದಲಿತ ಪಾತ್ರಗಳನ್ನು ಕುರಿತಾದ ಪರ ಹಾಗೂ ವಿರೋದ ಅಂಶಗಳನ್ನು ಗುರುತಿಸಿದ್ದಾರೆ. ಕೆ. ಎಸ್. ಭಗವಾನ್, ಬಿ. ಕೃಷ್ಣಪ್ಪ, ಕೆ. ಆರ್. ದುರ್ಗದಾಸ್, ಮೊಗಳ್ಳಿ ಗಣೇಶ್, ದೇವನೂರ ಮಹಾದೇವ, ಕರೀಗೌಡ ಬೀಚನಹಳ್ಳಿ ಮುಂತಾದ ವಿಮರ್ಶಕರು ಕುವೆಂಪು ಕಾದಂಬರಿಗಳಲ್ಲಿ ದಲಿತ ಪಾತ್ರ ಚಿತ್ರಣಗಳನ್ನು ಅಲ್ಲಿನ ದಲಿತ ಪಾತ್ರ ಚಿತ್ರಣದ ಸಾಮ್ಯ-ಭಿನ್ನತೆಗಳನ್ನು ಚಿತ್ರಿಸಿದ್ದಾರೆ. ಮೇಲಿನ ಕೇಲವು ವಿಮರ್ಶಕರು ತಮ್ಮ ಲೇಖನಗಳಲ್ಲಿ ಕುವೆಂಪುರವರ ದಲಿತ ಪರ ಕಾಳಜಿಯನ್ನು ಗುರುತಿಸಿದ್ದಾರೆ. ಮತ್ತೆ ಕೆಲವರು ಕುವೆಂಪುರವರು ಪೂರ್ವಗ್ರಹ ಪೀಡಿತರಾಗಿ ದಲಿತರನ್ನು ಕಾದಂಬರಿಯಲ್ಲಿ ಅವಮಾನಿಸಿದ್ದಾರೆ ಎಂಬ ಅಕ್ಷೇಪವನ್ನು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯಗಳ ಸತ್ಯ-ಸತ್ಯತೆಯನ್ನು ಕಂಡುಕೊಳ್ಳುವುದು ನನ್ನ ಅಧ್ಯಯನದ ಮುಂದಿನ ಭಾಗದ ಉದ್ದೇಶವಾಗಿದೆ. ವಿಮರ್ಶಕರು ಗುರುತಿಸಿರುವ ಅಂಶಗಳಲ್ಲಿನ ಮನೋಧರ್ಮವನ್ನು ಕಾದಂಬರಿಕಾರರು ಹೊಂದಿದ್ದಾರೆಯೆ? ಅಥವಾ ಇವರ ಅಭಿಪ್ರಾಯಗಳು ವಿಮರ್ಶೆಯ ದೃಷ್ಟಿಯಿಂದ ಹುಟ್ಟಿಕೊಂಡಿರುವಂತಹವೇ ಎಂಬ ಅಂಶಗಳನ್ನು ಗುರುತಿಸುವ ಪ್ರಯತ್ನವನ್ನು ಮುಂದೆ ಮಾಡಲಾಗಿದೆ.

ಅಧ್ಯಯನದ ಅನುಕೂಲಕ್ಕಾಗಿ ಮುಖ್ಯವಾಗಿ ನಾಲ್ಕು ಜನ ವಿಮರ್ಶಕರ ಅಭಿಪ್ರಾಯಗಳನ್ನು ನನ್ನ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಇದರಲ್ಲಿ ಬಿ. ಕೃಷ್ಣಪ್ಪ, ರಹಮತ್ ತರೀಕೆರೆ, ಧರಣೀದೇವಿ ಮಾಲಗತ್ತಿ ಮತ್ತು ಎಂ. ಜಿ. ಕೃಷ್ಣಮೂರ್ತಿ ಇವರ ಅಭಿಪ್ರಾಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಮೇಲಿನ ನಾಲ್ಕು ಜನ ವಿಮರ್ಶಕರು ಕುವೆಂಪು ಕಾದಂಬರಿಗಳಲ್ಲಿನ ವಿವಿಧ ಅಂಶಗಳನ್ನು ವಿಭಿನ್ನ ದೃಷ್ಟಿಕೋನದಿಂದ ವಿಮರ್ಶಿಸಿದ್ದಾರೆ. ಈ ಕಾರಣಕ್ಕಾಗಿ ಮೇಲಿನವರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಬಿ. ಕೃಷ್ಣಪ್ಪನವರು ಕುವೆಂಪುರವರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ದಲಿತ ಪಾತ್ರಗಳ ಬಗ್ಗೆ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದಾರೆ. ಕುವೆಂಪುರವರು ಒಂದು ಕಡೆ ಶೋಷಣೆಯನ್ನು ಪ್ರತಿಭಟಿಸಿ ಮತ್ತೊಂದು ಕಡೆ

ಅದನ್ನು ಮೌನವಾಗಿ ಒಪ್ಪಿಕೊಳ್ಳುತ್ತಾರೆ ಎಂಬುದು ಒಂದು. ಮತ್ತೊಂದು ಹಿಂದೂ ಜಾತಿ ವ್ಯವಸ್ಥೆಯ ಬ್ರಾಹ್ಮಣಾ ಶಾಹಿಯನ್ನು ವಿರೋಧಿಸುವ ಕುವೆಂಪುರವರು ಏಕಕಾಲಕ್ಕೆ ಶೂದ್ರರ ದಲಿತ ಶೋಷಣೆಯನ್ನು ಮೌನವಾಗೆ ಒಪ್ಪಿಕೊಳ್ಳುತ್ತಾರೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಒಟ್ಟಾರೇ ಅವರು ಕಾದಂಬರಿ ಕುರಿತಾದ ಬಿನ್ನಾಭಿಪ್ರಾಯವನ್ನು ಸಂಗ್ರಹಿಸಿ ಕೆಳಗಿನಂತೆ ಹೇಳಿದ್ದಾರೆ. ".................. ದಲಿತರ ಬೌದ್ಧಿಕ, ಮಾನಸಿಕ ಹಾಗೂ ದೈಹಿಕ-ಆರ್ಥಿಕ ದಿವಾಳಿತನಕ್ಕೆ ಬ್ರಾಹ್ಮಣರು ಪರೋಕ್ಷವಾಗಿಯೂ ಗೌಡರು ಪತ್ಯಕ್ಷವಾಗಿಯೂ ಕಾರಣರಾಗಿದ್ದಾರೆ ಎಂದು. ಬ್ರಾಹ್ಮಣನ ಕೆಳಗೆ ಗೌಡ, ಗೌಡನ ಕೆಳಗೆ ದಲಿತರು ಜಾತಿಯ ಈ ಪಿರಮಿಡ್ ರಚನೆಯಲ್ಲಿ ಬ್ರಾಹ್ಮಣನ ಪಾದ ಶೂದ್ರನ ತಲೆಯ ಮೇಲೆದ್ದರೆ, ಶೂದ್ರನ ಪಾದಗಳು ದಲಿತನ ತಲೆಯ ಮೇಲಿವೆ. ಹೀಗಾಗಿ ದಲಿತರ ಮೇಲಿನ ತುಳಿತವು ಬ್ರಾಹ್ಮಣನಿಗಿಂತ ಶೂದ್ರನಿಂದ ನೇರವೂ ತೀವ್ರವೂ ಆಗಿ ಪರಿಣಮಿಸಿ ಅಮಾನುಷವಾಗುತ್ತದೆ. ಕುವೆಂಪು ತಮ್ಮ ಕಾದಂಬರಿಗಳಲ್ಲಿ ದಲಿತರ ಇಂಥ ಪರಿಸ್ಥಿತಿಯನ್ನು ವರ್ಣಿಸುತ್ತಾರಾದರೂ ಅವರ ಅಂತಃಕರಣವೆಲ್ಲ ಉಳಿಗಮಾನ್ಯ ಜಮೀನುದಾರರ ಗೌಡರ ಪರವಾಗಿದ್ದು ಬ್ರಾಹ್ಮಣ ವಿರೋಧಿಹಾಗಿದೆಯೆ ಹೊರತು ದಲಿತ ಪರವಾಗಿಲ್ಲ ಎಂಬುದನ್ನು ೧೪೦೦ ಪುಟಗಳಷ್ಟು ಓಡುವ 'ಕಾನೂರು ಹೆಗ್ಗಡಿತಿ'. **ಮಲೆಗಳಲ್ಲಿ ಮದುಮಗಳು** ಕಾದಂಬರಿಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವ ಯಾರಿಗಾದಾರೂ ಗ್ರಹಿಕೆಯಾಗುತ್ತದೆ. ಕುವೆಂಪು ಅವರಿಗೆ ಮೇಲಿರುವ ಬ್ರಾಹ್ಮಣರು ಕಾಣುತ್ತಾರೆಯೇ ಹೊರತು ಕೆಳಗೆ ಒದ್ದಾಡುತ್ತಿರುವ ದಲಿತರ ಚಿತ್ತವೇಧೆಗಳು ಅಷ್ಟಾಗಿ ಅರ್ಥವಾಗದೇ ಹೋಗುತ್ತದೆ. "[೩] ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ಆದರೆ ವಾಸ್ತವವಾಗಿ ಕುವೆಂಪುರವರು ತಮ್ಮ ಎರಡು ಕಾದಂಬರಿಗಳಲ್ಲಿ ಒಕ್ಕಲಿಗರ, ಉಳಿಗಮಾನ್ಯ ವ್ಯವಸ್ಥೆಯ ಪರವಾಗಿರದೆ ಅವರ ಶೋಷಣೆ, ಕ್ರೌರ್ಯ, ಇವುಗಳನ್ನು ಖಂಡಿಸುವ ಧೋರಣೆಯನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಭೂಮಾಲಿಕರು ದಲಿತರ ಸಾಮಾಜಿಕ ಜೀವನದಲ್ಲಿ ಹೇಗೆ ಹಸ್ತಕ್ಷೇಪ ಮಾಡುತ್ತಿದ್ದರು ಎಂಬ ವಿಚಾರವನ್ನು ಹಲವಾರು ಪ್ರಸಂಗಗಳಲ್ಲಿ ವಿವರಿಸಿದ್ದಾರೆ. ಉದಾಹರಣೆಗಾಗಿ ತಿಮ್ಮ ಗುತ್ತಿಯೊಡನೆ ಓಡಿ ಹೋದ ಸಂದರ್ಭದಲ್ಲಿ ಸಣ್ಣ ಬೀರನಿಗೆ ಕಲ್ಲಯ್ಯಗೌಡರು ವಿಧಿಸುವ ಶಿಕ್ಷೆಯ ಸಂದರ್ಭವನ್ನು ನೋಡಬಹುದು. " ಸಣ್ಣಬೀರ ನಡುಕುದನಿಯಲ್ಲಿ ಕೈ ಕೈ ಮುಗಿಯುತ್ತಾ ಅಯ್ಯ, ನಿಮ್ಮ ಉಪ್ಪು ಅನ್ನತಿಂದು ನಿಮಗೆ ನಾ ಸುಳ್ಳು ಹೇಳಾದಿಲ್ಲ ಧರ್ಮಸ್ಥಳದ ದೇವ್ರಾಣೆಗೂ ನಂಗೋತ್ತಿಲ್ಲ........' ಅವನಿನ್ನು ಹೇಳಿ ಮುಗಿಸಿರಲಿಲ್ಲ. ಗೌಡರು ಲುಂಗೀ ಸಾಬುವನ್ನು ಕುರಿತು 'ಹೋಗೊ, ಬುಡನ್, ಒಂದಷ್ಟು ಹಣಸೇ ಬರಲು ಮುರಕೊಂಡು ಬಾರೋ'! ಎಂದು ಇಜಾರದ ಸಾಬಿಯ ಕಡೆ ನೋಡಿ'ಏನೋ ನೊಡ್ತಿಯಾ ? ಕಟ್ಟೋ ಅವನ್ನ ಕಂಬಕ್ಕೆ' ಎಂದು ಕಠಿಣ ಧ್ವನಿಯಲ್ಲಿ ಆಜ್ಞಾಪಿಸಿದರು.

ಇಜಾರದ ಸಾಬು ತನ್ನ ಕೈಯಿಂದ ಉಗ್ರಸನ್ನೆ ಮಾಡಿ ತಲೆಯಾಡಿಸಿ ಕರೆದೊಡನೆಯೆ, ಗಾಡಿಯ ನೂಗಕ್ಕೆ ಹೆಗಲು ಕೊಟ್ಟು ಕೊಟ್ಟು ಅಭ್ಯಾಸವಿದ್ದ ಗಾಡಿಯೆತ್ತು ಗಾಡಿ ಹೊಡೆಯುವವನು ಮೂಕಿಗೆ ಕೈಹಾಕಿ ಎತ್ತಿ ಲೋಚಗುಟ್ಟಿದೊಡನೆಯ ನೂಗಕ್ಕೆ ವಿಧೇಯತೆಯಿಂದ ಹೆಗಲು ಕೋಡುವಂತೆ, ಸಣ್ಣಬೀರ ನಡುಗುತ್ತಲೆ, ನಾಲಗೆ ಬಿದ್ದು ಹೋಗಿ ಮಾತುಸತ್ತವನತಂತೆ, ಮೂಕ ಪಶುವಿನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನು ಒಮ್ಮೆ ದುಃಖದೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನು ನೋಡುತ್ತಾ ಶಿಕ್ಷಾಸ್ತಂಭದ ಕಡೆ ಮುಂದುವರಿದನು. ಅವನು ಹೋದ ರೀತಿ, ಆ ಕಂಬವನ್ನು ತಬ್ಬಿ ನಿಂತ ರೀತಿ ಎರಡು ಕೈಗಳನ್ನು ಜೋಡಿಸಿ ಹಗ್ಗ ಬಿಗಿಸಿಕೊಂಡ ರೀತಿ, ಹೇಗಿತ್ತು ಎಂದರೆ ಆ ಯೂಪ ಸ್ತಂಭಕ್ಕೆ ಬಲಿ ಕಟ್ಟಿಸಿಕೊಳ್ಳುವ ಯಜ್ಞವಿಧಾನ ಅವನಿಗೆ ಪೂರ್ವಪರಿಚಿತವಾದದ್ದು ಎಂಬುದು ಚೆನ್ನಾಗಿ ಗೊತ್ತಾಗುವಂತಿತ್ತು. ತಾನು ಮಾತ್ರವೇ ಅಲ್ಲದೇ ಇತರ ಅಪರಾಧಿಗಳೂ ಗೌಡರ ಕ್ರೋಧಕ್ಕೆ ಪಾತ್ರರಾಗಿ ಆ ಯೂಪಸ್ತಂಭಕ್ಕೆ ಯಜ್ಞ ಪಶುಗಳಾಗಿದ್ದುದ್ದನ್ನು ಅವನು ಹಿಂದೆ ಎಷ್ಟೋಸಾರಿ ಕಂಡೂ ಇದ್ದನು, ಅನುಭವಿಸಿಯೂ ಇದ್ದನು. ಆಜ್ಞೆಯಾದೊಡನೆಯೆ ಹೋಗಿ, ನೂಗಕ್ಕೆ ಹೆಗಲು ಕೊಡುವಂತೆ ಕಂಬವನ್ನು ತಬ್ಬಿನಿಂತು ಕೈ ಕಟ್ಟಿಸಿಕೊಳ್ಳಲು ಒಪ್ಪದೇ ಪ್ರತಿಭಟಿಸಿದವರಿಗೆ ಏನು ಯಮಶಿಕ್ಷೆ ಒದಗುತ್ತಿತ್ತು. ಎಂಬುದೂ ಅವನಿಗೆ ಗೋತ್ತಿದ್ದ ವಿಷಯವೇ ಆಗಿತ್ತು. ಆದ್ದರಿಂದಲೇ ಅವನು

ಚಕಾರ ವೆತ್ತದೆ ಬೇಗ ಬೇಗ ಹೋಗಿ ಕಂಬವನ್ನಪ್ಪಿ ಕೈ ಕಟ್ಟಿಸಿಕೊಂಡದ್ದು.

ಲುಂಗೀಸಾಬು ತಂದು ಒಟ್ಟಿದ ಹುಣಸೇ ಬರಲುಗಳಲ್ಲಿ ಒಂದ್ನು ತಜ್ಞನಂತೆ ಪರಿಶೀಲಿಸಿ ಆರಿಸಿಕೊಂಡ ಇಜಾರದ ಸಾಬು ಸಣ್ಣಬೀರನ ಬತ್ತಲೆಯ ಬೆನ್ನ ಮೇಲೆಯೂ (ಹೋದೆದಿದ್ದ ಕಂಬಳಿಯನ್ನು ಸಣ್ಣಬೀರನೆ ಕಂಬ ತಬ್ಬಲು ಹೋಗುವ ಮುನ್ನ ಅನಿವಾರ್ಯ ರೂಢಿಗೆ ವಶನಾಗಿ ತೆಗೆದುಹಾಕಿದ್ದನು.) ಕೊಳಕಲಾಗಿದ್ದ ಹರಕಲು ಪಂಚೆ ಸುತ್ತಿದ್ದ ಅಂಡಿನ ಮೇಲೆಯೂ ಸಶಬ್ದವಾಗಿ ಪ್ರಯೋಗ ಮಾಡಿದನು. ಚಿಟಾರನೆ ಕೂಡಿಕೊಂಡು ಕೀರಿ ರೋದಿಸುತ್ತಾ 'ದಮ್ಮಯ್ಯ, ಸಾಬ್ರೆ, ಹೊಡೀಬ್ಯಾಡಿ, ನಾ ಸಾಯ್ತಿನಿ, ನನ್ನ ಹೆಂಡ್ರು ಮಕ್ಕಳ ಬಾಯಲ್ಲಿ ಮಣ್ಣು ಹಾಕಬ್ಯಾಡಿ, ನಿಮ್ಮ (ಒಂದು ಅಸಹ್ಯ ಪದ ಪ್ರಯೋಗ ಮಾಡಿ) ತಿನ್ತೀನಿ ! ಅಯ್ಯೋ ಅಪ್ಪಾ ಬಿಡಿಸೋ! ನಂಗೋತ್ತಿಲ್ಲೋ, ತಿಮ್ಮಿ ಎಲ್ಲಿ ಹೋದ್ಲು ಅಂತಾ! ಅಯ್ಯೋ ಅಯ್ಯೋ ಅಯ್ಯೋ ! ಎಂದು ಸಣ್ಣಬೀರ ಒದ್ದಾಡಿಕೊಂಡು ಒರಲುತ್ತಿದ್ದ ಹಾಗೆಯ ಇಜಾರದ ಸಾಬಿ ಮತ್ತು ಒಂದು ಎರಡು ಮೂರು ಸಾರಿ ಬರಲನ್ನು ಬೀಸಿ ಬೀಸಿ ಹೊಡೆದೇ ಬಿಟ್ಟನು.

ಮೊದಲ ಬಾರಿಯ ಹೊಡೆತಕ್ಕೆ ಬಾಸುಂಡೆಗಳೆದ್ದಿದ್ದ ಬನ್ನು ಎರಡನೆಯ ಸುತ್ತಿನ ಪೆಟ್ಟುಗಳಿಗೆ ಇದ್ದಕ್ಕಿದ್ದ ಹಾಗೆಯೇ ಕೆಂಪಾಯತು. ನೆತ್ತರು ಚಿಮ್ಮಿ! ಅವನು ಹುಟ್ಟಿದ್ದ ಪಂಚೆ ಒದ್ದೆಯಾಗಿ ಕಾಲ ಮೇಲೆ ಇಳಿದ ಉಚ್ಚೆಗೆ ನೆಲ ತೊಯ್ದಿತ್ತು. ಅಂಡಿನ ಬಟ್ಟೆಯೂ ರಕ್ತದಿಂದ ಕೆಂಪಾಯಿತು. ಅವನ ಕೂಗು ಒಮ್ಮೆಗೆ ನಿಂತು ಬಿಟ್ಟಿತು. ತಲೆ ಕತ್ತಿನ ಮೇಲೆ ನಿಲ್ಲಲ್ಲೋದೇ ಜೋಲಿತು. "[೪] ಇಲ್ಲಿ ಕುವೆಂಪುರವರು ಭೂಮಾಲಿಕರು ದಲಿತ ಸಮುದಾಯವನ್ನು ಹೇಗೆ ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದರು ಎಂಬ ಅಂಶದ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಕುವೆಂಪುರವರು ಮೇಲಿನ ಸಂದರ್ಭದಲ್ಲಿ ವಾಸ್ತವವಾಗಿ ಉಳಿಗಮಾನ್ಯ ವ್ಯವಸ್ಥೆಯ ಪರವಾಗಿಲ್ಲ. ಅವರು ದಲಿತರ ಪರವಾಗಿದ್ದಾರೆ. ಎಂಬ ಅಂಶ ಮೇಲಿನ ಭಾಗದ ಸೂಕ್ಷ್ಮ ಅಧ್ಯಯನದಿಂದ ತಿಳಿಯುತ್ತದೆ. ಕಲ್ಲಯ್ಯಗೌಡರಿಗೆ ಮುಖ್ಯವಾಗಿ ಎರಡು ವಿಚಾರದಲ್ಲಿ ಅವಮಾನವಾಗಿದೆ. ಒಂದು ತಮ್ಮ ಜಮೀನಿನಲ್ಲಿ ದುಡಿಯಲು ಒಬ್ಬ ಆಳು ಕಡಿಮೆಯಾಗಿದೆ, ಅದರಂತೆ ಅವರಿಗೆ ಸಿಂಬಾವಿ ಹೆಗ್ಗಡೆಯವರ ಮೇಲಿರುವ ವಂಶಪಾರಂಪರ್ಯ ಸೇಡು. ಈ ಎರಡು ಅಂಶಗಳು ಅವರನ್ನು ಕೆರಳಿಸಿದೆ. ಮೇಲಿನ ಘಟನೆಯನ್ನು ಕುವೆಂಪುರವರು ವರ್ಣೀಸಿರುವುದು ಕ್ರೌರ್ಯಕ್ಕೆ ಒಳಗಾದವನ ಮೇಲಿನ ಅಂತಃಕರಣದಿಂದ ಎಂಬುದನ್ನು ಇಲ್ಲಿ ಗಮನಿಸಬೇಕು. ವಿನಾಕಾರಣ ಅಸಾಯಕರ ಮೇಲೆ ನಡೆಸುವ ದೌರ್ಜನ್ಯ ಮಾನವೀಯತೆಗೆ ವಿರುದ್ಧವಾದುದು ಎಂಬುದು ಕುವೆಂಪುರವರ ಅಭಿಪ್ರಾಯ. ಕುವೆಂಪುರವರು ಕೇವಲ ದಲಿತರನ್ನು ಶಿಕ್ಷಿಸುವ ಘಟನೆಗಲನ್ನಷ್ಟೇ ಅಲ್ಲದೇ ಸರ್ವಣೀಯರು ಇಂತಹ ಶಿಕ್ಷೆಗಳಿಗೆ ಗುರಿಯಾಗಿರುವ ಹಲವಾರು ಪ್ರಸಂಗಗಳನ್ನು ದಾಖಲಿಸಿದ್ದಾರೆ. ಕಾನೂರು ಹೆಗ್ಗಡಿತಿಯಲ್ಲಿ ತನ್ನ ಜಾತಿಯವನೆ ಆದ ಓಬಯ್ಯನನ್ನು ಚಂದ್ರಯ್ಯ ಗೌಡರು ಶಿಕ್ಷಿಸುವುದನ್ನು ನೋಡಬಹುದು. ಅದೇ ರೀತಿ ಚಂದ್ರೇಗೌಡರು ಸುಬ್ಬಮ್ಮನ ಮೇಲೆ ನಡೆಸುವ ಅಮಾನುಷ ಹಲ್ಲೆಯನ್ನು ಕುವೆಂಪುರವರು ದಾಖಲಿಸಿದ್ದಾರೆ. ಸುಬ್ಬಮ್ಮನನ್ನು ದಂಡಿಸುವ ಪ್ರಸಂಗ ಹೀಗಿದೆ. "......ಚಂದ್ರಯ್ಯಗೌಡರು ಮೇಲೆದ್ದು ನಾಗಂದಿಗೆಯ ಸಂದಿಯಲ್ಲಿ ಬೆಕ್ಕನ್ನು ಹೆದರಿಸಿ ಓಡಿಸಲೆಂದು ಇಟ್ಟಿದ್ದ ಒಂದು ದಪ್ಪನೆಯ ನೆಕ್ಕಿಯ ಕೋಲನ್ನು ಎಂಜಲು ಕೈಯಿಂದಲೆ ಸೆಳೆದುಕೊಂಡು ಹೆಂಡತಿಗೆ ರಪ್ಪ ರಪ್ಪನೆ ರಕ್ಕಸವಾಗಿ ಹೊಡೆಯತೊಡಗಿದರು. ಸುಬಮ್ಮ 'ದಮ್ಮಯ್ಯ' ಎಂದು ಚೀರಿದಳು. ಅವಳು ಚೀರಿದಷ್ಟು ಹೆಚ್ಚಾಗಿಯೆ ದಬ್ಬೆಗಳು ಬೀಳತೊಡಗಿದವು. ಒಂದು ನಿಮಿಷದಲ್ಲಿ ಅ ನೆಕ್ಕಿಯ ಕೋಲೂ ಕೆಲವು ಕೈ ಬಳೆಗಳು ಹುಡಿಯಾದುವು. ಎಡಗೈಯಿಂದ ಹೆಂಡತಿಯ ತುರುಬು ಹಿಡಿದುಕೊಂಡು ಬಲಗೈಯಿಂದ ಗುದ್ದುತೊಡಗಿದರು. ನಾಗಮ್ಮ, ಪುಟ್ಟಮ್ಮ ಇಬ್ಬರಿಗೂ ಸುಬ್ಬಮ್ಮನ ಸಹಾಯಕ್ಕೆ ಬರಲು ಮಸಸ್ಸಾಗಿದ್ದಾರೂ ಗೌಡರ ಭೀಷಣ ಕ್ರೋಧಕ್ಕೆ ಹೆದರಿ. ದೂರ ಬೆಪ್ಪಾಗಿ ನಿಂತಿದ್ದರು. "[೫] ಮೇಲಿನ ಘಟನೆಯು ಸಹ ಶಿಕ್ಷೆ ವಿಧಿಸುವ ವಿಧಾನವನ್ನು ತಿಳಿಸುತ್ತದೆ. ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ದಲಿತ, ಅಥವಾ ದಲಿತೇತರ ಯಾರೇ ಆದರೂ

ತಪ್ಪು ಮಾಡಿದಾಗ ಉಳಿಗಮಾನ್ಯ ವ್ಯವಸ್ಥೆಯಿಂದ ತಾವು ಅನುಭವಿಸುತ್ತಿದ್ದ ಶಿಕ್ಷೆಯ ಸ್ವರೂಪವನ್ನು ಚಿತ್ರಿಸಿದ್ದಾರೆ. ಇಲ್ಲಿ ಕಾದಂಬರಿಕಾರರು ಶ್ರೀಮಂತರ ಪರವಿಲ್ಲದೇ ಬಡ ಬಗ್ಗರ, ಶೋಷಿತರ ಪರವಾಗಿದ್ದಾರೆ. ಎಂಬುದನ್ನು ಗಮನಿಸಬೇಕು.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಯಾವುದೇ ಘಟನೆಯನ್ನು ಭಾವುಕತೆಯಿಂದ ಚಿತ್ರಿಸುವುದಿಲ್ಲ. ಎಷ್ಟೇ ಪರಿಣಾಮಕಾರಿಯಾದ ಘಟನೆಯಾದರೂ ನಿರ್ಲಿಪ್ತತತೆಯಿಂದ ಚಿತ್ರಿಸುತ್ತಾರೆ. ಜೀತದಾಳುಗಳ ನಿಸ್ಸಹಾಯಕತೆಯನ್ನು ಧಣಿಗಳ ನಿರ್ದಯತೆಯನ್ನು ಒಟ್ಟಿಗೆ ಯಾವುದೇ ಭಾವೋದ್ವೇಗಕ್ಕೆ ಒಳಗಾಗದೇ ಶಕ್ತಿಯುತವಾಗಿ ಚಿತ್ರಿಸುತ್ತಾರೆ. ಜೀತದಾಳುಗಳ ನಿಸ್ಸಹಾಯತೆಯನ್ನು ಧಣಿಗಳ ನಿರ್ಧಯತೆಯನ್ನು ಒಟ್ಟಿಗೆ ಯಾವುದೇ ಭಾವೋದ್ವೇಗಕ್ಕೆ ಒಳಗಾಗದೇ ಶಕ್ತಿಯುತವಾಗಿ ಚಿತ್ರಿಸುತ್ತಾರೆ. ಇಂತಹ ಚಿತ್ರಣವನ್ನು ದೇವನೂರ ಮಹಾದೇವ ಅವರ ಕಾದಂಬರಿಗಳಲ್ಲಿ ಕಾಣಬಹುದು. ಇವರು ತನ್ನ ಕಾದಂಬರಿಗಳಲ್ಲಿ ಎಂತಹ ಸಂದಿಗ್ಧ ಪರಿಸ್ಥಿತಿಗಳ ಚಿತ್ರಣವನ್ನು ದಾಖಲಿಸುವಾಗಲೂ ಯಾವುದೇ ಉದ್ವೇಗಕ್ಕೇ ಒಳಗಾಗದೇ ಶಾಂತಚಿತ್ತದಿಂದ ನಿರ್ಲಿಪ್ತವಾಗಿ ದಲಿತ ಬದುಕಿನ ಚಿತ್ರಣವನ್ನು ನೀಡುತ್ತಾರೆ. ಕುವೆಂಪುರವರು ಮಾನವತಾವಾದಿ ನೆಲೆಯಲ್ಲಿ ಎಲ್ಲಾ ಸಮುದಾಯಗಳನ್ನು ಕಂಡವರು. ಮೇಲಿನ ಎರಡು ಘಟನೆಗಳಲ್ಲಿ ಕಾದಂಬರಿಕಾರರ ಪ್ರೀತಿ. ಸಹಾನುಭೂತಿ ಕೆಳವರ್ಗದ, ದಲಿತರ, ಶೋಷಿತರ ಮೇಲೆ ಇದೆ ಎಂಬುದನ್ನು ಗಮಿಸಬೇಕು. ಕಾದಂಬರಿಕಾರರ ಒಟ್ಟು ಅಂತಃಕರಣ ಇಂತಹ ಕ್ರೌರ್ಯಕ್ಕೆ ಗುರಿಯಾಗಿರುವ ಅಸಹಾಯಕ ಜೀವಿಗಳ ಮೇಲೆ ವ್ಯಕ್ತವಾಗಿರುವುದನ್ನು ಗಮನಿಸಬಹುದು. ಈ ಕಾರಣಗಳಿಗಾಗಿ ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ದಲಿತ ವಿರೋಧಿ ನಿಲುವು ತಾಳಿಲ್ಲವೆಂದು ಹೇಳಬಹುದು. ಈ ಹಿನ್ನಲೆಯ ಬಿ. ಕೃಷ್ಣಪ್ಪನವರ ಆರೋಪ ದುಡುಕಿನ ನಿರ್ಧಾರದ್ದು ಎಂದರೆ ತಪ್ಪಾಗಲಾರದು. ಈ ವಿಚಾರವಾಗಿ ಕೆ. ಎಸ್. ಭಗವಾನ್, ಕೆ. ಆರ್. ದುರ್ಗಾದಾಸ್‌ರವರು ಕೃಷ್ಣಪ್ಪನವರ ಆರೋಪಗಳಿಗೆ ಸಕಾರಣವಾಗಿ ಉತ್ತರಿಸಿದ್ದಾರೆ.

ರಹಮತ್ ತರೀಕೆರೆಯವರು ತಮ್ಮ 'ಪ್ರತಿ ಸಂಸ್ಕೃತಿ'ಯಲ್ಲಿ ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ದಾಖಲಿಸಿರುವ ಪ್ರತಿಭಟನೆಯ ಸ್ವರೂಪದ ಬಗ್ಗೆ ಮಾತಾನಡುತ್ತಾ "ಕುವೆಂಪು ಅವರ ಪ್ರತಿಭಟನೆಯು ಇಬ್ಬಾಯಿಯದು."(ಪುಟ:೧೨೬) ಎಂದು ಅಕ್ಷೇಪಣೆ ಮಾಡುತ್ತಾರೆ. ಏಕೆಂದರೆ ಕುವೆಂಪುರವರು ಶೋಷಣೆಯ ವಿರುದ್ದ ಪ್ರತಿಭಟಿಸುವಾಗ ದ್ವಂದ್ವ ನಿಲುವನ್ನು ಹೊಂದಿದ್ದಾರೆ. ಎಂಬುದು ಅವರ ಅಭಿಪ್ರಾಯ. ಸಮಾಜದ ಅಸಮಾನತೆಯ ವಿರುದ್ದ ಹೋರಾಡುವ ಹೂವಯ್ಯ, ದೇವಯ್ಯ, ಮುಕುಂದಯ್ಯ ಮುಂತಾದವರ ಪಾತ್ರವನ್ನು ಸೃಷ್ಟಿಸಿದ ಕುವೆಂಪುರವರು ಕೆಳಜಾತಿಯ ಸಮಸ್ಯೆಯಾದ ಜೀತಪದ್ದತಿಯ ನಿರ್ಮೂಲನೆಯ ಬಗ್ಗೆ ಈ ಪಾತ್ರಗಳು ಪ್ರಯತ್ನಿಸುವುದಿಲ್ಲ ಎಂಬ ಕಾರಣಕ್ಕಾಗಿ ಅವರ ಪ್ರತಿಭಟನೆಯ ಸ್ವರೂಪ ಇಬ್ಬಾಯಿಯದು ಎಂದು ಹೇಳಿದ್ದಾರೆ.

ಆದರೆ ವಾಸ್ತವವಾಗಿ ಈ ಪಾತ್ರಗಳು ಕಾದಂಬರಿಯಲ್ಲಿ ಪ್ರಗತಿಪರ ಧೋರಣೆಯನ್ನು ಹೊಂದಿರುವುದನ್ನು ನೋಡಬಹುದು. ಕಾನೂರು ಹೆಗ್ಗಡಿತಿ ಮತ್ತು ಮದುಮಗಳು ಕಾದಂಬರಿಯ ಹಲವು ಸನ್ನಿವೇಶಗಳನ್ನು ಗಮನಿಸಿದರೆ ಮೇಲಿನ ಹೇಳಿಕೆಗೆ ಪುಷ್ಟಿ ಬರುತ್ತದೆ. ಹೂವಯ್ಯ ತನ್ನ ಬಳಿ ಕೂಲಿ ಮಾಡುವ ಕೆಲಸಗಾರರ ಮನೆ ಬಾಗಿಲಿಗೆ ಹೋಗಿ ಅವರ 'ಪಡಿ'ಯನ್ನು ತಲುಪಿಸುವ ಕಾರ್ಯ ಕ್ರಾಂತಿಕಾರಕವಾದುದು. ಅದೇ ರೀತಿ ಬಡಬಗ್ಗರ ಗುಡಿಸಲುಗಳಿಗೆ ಹೋಗಿ ಔಷಧಿ ನೀಡಿ ಅವರನ್ನು ಸ್ವತಃ ಉಪಚರಿಸುವ ಅನೇಕ ಘಟನೆಗಳು ಕಾದಂಬರಿಯಲ್ಲಿ ಇವೆ. ಸೀತೆಯೂ ಕೂಡ ದಲಿತ ಮಕ್ಕಳಿಗೆ ಅಕ್ಷರವನ್ನು ಕಲಿಸುವ ಪ್ರಯತ್ನ ಮಾಡುವುದನ್ನು ನೋಡಬಹುದು. ಮೇಲಿನ ಪ್ರಯತ್ನಗಳೆಲ್ಲಾ ದಲಿತರು ಪರಂಪರಾಗತವಾಗಿ ನಡೆಸಿಕೊಂಡು ಬಂದಿರುವ ಕೆಲವು ಆಚರಣೆಗಳಲ್ಲಿ ಬದಲಾವಣೆಯನ್ನು ಉಂಟುಮಾಡುವ

ಆಶಯವನ್ನು ಹೂವಯ್ಯ ಹೊಂದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಕಾರಣಕ್ಕಾಗಿ ದಲಿತ ಸಮುದಾಯದಲ್ಲಿ ಉಳಿಗಮಾನ್ಯ ಪದ್ಧತಿಯ ವಿರುದ್ಧ ಹಿಂದಿನಿಂದ ಸಾಧಿಸಿಕೊಂಡು ಬಂದ ಸೇಡಿನ ಮನೋಭಾವ ಕಾಣುವುದಿಲ್ಲ. ಇದನ್ನು ಬಾಡುಗಳ್ಳ ಸೋಮನ ಮಾತು ಸ್ಪಷ್ಟ ಪಡಿಸುತ್ತದೆ. "ಸ್ವಾಮಿಗೆ ತನ್ನನ್ನು ಕಾಡುತನದಿಂದ ಈ ನಾಗರಿಕ ಸ್ಥಿತಿಗೆ ತಂದು ಪೊರೆದ ಸ್ವಾಮಿಗೆ, ಯಾರಿಗೂ ಕೇಡೆಣಿಸದೆ ಎಲ್ಲರನ್ನೂ ಉದ್ಧಾರ ಮಾಬೇಕೆಂದು ಯತ್ನಿಸುತ್ತಿರುವ ಸ್ವಾಮಿಗೆ, ಕೀಳುಜಾತಿಯ ಬಡಬಗ್ಗರ ಮುರುಕಲು ಹರಕಲು ಗುಡಿಸಲುಗಳಿಗೆ ಔಷಧಿ ಪಥ್ಯಗಳನ್ನು ಕೊಂಡೊಯ್ದು ನೀಡಿ ಕಾಪಾಡಿ ದೇವರಂತಿರುವ ಸ್ವಾಮಿಗೆ ದ್ರೋಹ ವೆಸಗಿದಂತಾಗುತ್ತದಲ್ಲವೇ ?"೬ ಎಂಬ ಮಾತಿನಲ್ಲಿ ದಲಿತರಿಗೆ ಉಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಆಕ್ರೋಶದ ಬದಲಾಗಿ ಅನುಕಂಪ ಇರುವುದನ್ನು ನೋಡಬಹುದು.

ದೇವಯ್ಯನ ದಲಿತ ಪರವಾದ ನಿಲುವನ್ನು ಹೊಂದಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಈತ ದಲಿತರ ಬಚ್ಚನನ್ನು ಜೀತದಿಂದ ಬಿಡಿಸಿ ಅವನ್ನು ತನ್ನ ಗಾಡಿ ಹೊಡೆಯುವ ಆಳನ್ನಾಗಿ ನೇಮಿಸಿಕೊಂಡಿದ್ದಾನೆ. ದೇವಯ್ಯನಿಗೆ ಕ್ರಿಶ್ಚಿಯನ್ ಧರ್ಮದ ಸಂಪರ್ಕದಿಂದಾಗಿ ಆತ ಹಿಂದೂ ಧರ್ಮದಲ್ಲಿನ ಅಸಮಾನತೆ, ಮತ ಮೌಢ್ಯಗಳ ಬಗ್ಗ ಅಸಡ್ಡೆಯನ್ನು ಹೊಂದಿದ್ದಾನೆ. ಇದನ್ನು ದೊಡ್ಡಮ್ಮನವರ ಕೆಳಗಿನ ಮಾತುಗಳು ನಿರೂಪಿಸುತ್ತದೆ. "ನಿನ್ನ ದೇವಣ್ಣಯ್ಯ ಜಾತಿ ಗೀತೆ ಎಲ್ಲಾ ಬಿಟ್ಟಾಗದೆ ! ಬೇಕಾದ್ರೆ ಹೋಲೆರ ಹಟ್ಟರ ಸಂಗಡಾನು ಉಣ್ತಾನೆ" (ಕುವೆಂಪು:೧೯೯೨:೪೪೨) ಎಂಬ ಮಾತಿನಲ್ಲಿ ದೇವಯ್ಯನ ಪ್ರಗತಿಪರ ಚಿಂತನೆ ತಿಳಿಯುತ್ತದೆ. ಈ ಕಾರಣಕ್ಕಾಗಿ ದೇವಯ್ಯ ಬಚ್ಚನ ಬಗ್ಗೆ ಮೃದು ಧೋರಣೆಯನ್ನು ಹೊಂದಿದ್ದಾನೆ. ಬಚ್ಚನನ್ನು ಕ್ರಿಶ್ಚಿಯನ್ ಮತಕ್ಕೆ ಮತಾಂತರಿಸಿ ಆತ ಹಿಂದಿನಿಂದ ಅನುಭವಿಸಿದ ಶೋಷಣೆಯಿಂದ ಪಾರು ಮಾಡುವ ಉದ್ದೇಶವನ್ನು ದೇವಯ್ಯ ಹೊಂದಿರುವುದು ಕಾದಂಬರಿಯಲಿ ಸ್ಪಷ್ಟವಾಗಿ ತಿಳಿಯುತ್ತದೆ. (ಈ ಪ್ರಯತ್ನವನ್ನು ಕಾರಂತರು ಚೋಮನದುಡಿ ಕಾದಂಬರಿದಯಲ್ಲಿ ಮಾಡುವುದಿಲ್ಲ ಎಂಬ ಆರೋಪವನ್ನು ದಲಿತ ಚಿಂತಕರೇ ಮಾಡಿದ್ದಾರೆ). ಈ ಹಿನ್ನಲೆಯಲ್ಲಿ ದಲಿತನಾದ ಬಚ್ಚನಿಗೆ ಈ ರೀತಿ ತಿಳುವಳಿಕೆ ಮಾಡಿಸಲಾಗಿದೆ. "ನೀನಿನ್ನು ಹೊಲೆರಂವ ಅಲ್ಲ. ಬಿರಾಂಬ್ರ ಮನೀಗಾಗ್ಲಿ, ಗೌಡ್ರ ಮನೀಗಾಗ್ಲಿ ಹೋದ್ರೆ. ಅಂಗಳದಾಗೆ ನಿತ್ಗೊಬ್ಯಾಡ ಜಗ್ಲೀಗೆ ಹೋಗಿ ಕೂತ್ಗಾ." (ಕುವೆಂಪು:೧೯೯೨: ೬೭೪) ಎಂಬ ಬೆಂಬಲವನ್ನು ನೀಡುತ್ತಿರುವುದನ್ನು ಗಮನಿಸಬಹುದು. ಈ ರೀತಿ ದೇವಯ್ಯ, ಹೂವಯ್ಯನವರು ದಲಿತ ಸಮುದಾಯದಲ್ಲಿ ಸಮಾನತೆಗಾಗಿ ಶ್ರಮಿಸುತ್ತಿರುವುದನ್ನು ಕಾದಂಬರಿಯಲ್ಲಿ ಕಾಣಬಹುದು. ಇದರ ಫಲಿತಾಂಶಗಳು ಏನೇ ಇದ್ದರೂ ಆ ನಿಟ್ಟಿನಲ್ಲಿ ಕುವೆಂಪುರವರು ಪ್ರಯತ್ನಿಸುತ್ತಿರುವ ಸ್ಪಷ್ಟ ಚಿತ್ರಣ ಓದುಗರಿಗೆ ಗೋಚರಿಸುತ್ತದೆ.

ದೇವಯ್ಯ ಮತ್ತು ಹೂವಯ್ಯನವರ ಚಿಂತನೆಗಳು ಪ್ರಗತಿಪರ ಧೋರಣೆಯ ವಿಚಾರದಲ್ಲಿ ವೈರುಧ್ಯಗಳಿರುವುದನ್ನು ಗಮನಿಸಬಹುದು. ದೇವಯ್ಯನದು ಹಿಂದೂ ಧರ್ಮದ ಮೌಢ್ಯಗಳನ್ನು ಒಟ್ಟಾಗಿ ದಿಕ್ಕರಿಸುವ ಮನೋಭಾವವುಳ್ಳದ್ದು. ಈತ ಪುರೋಹಿತ ಶಾಹಿಯನ್ನು ವಿರೋಧಿಸುವುದರ ಜೊತೆಗೆ 'ಬ್ರಾಹ್ಮಣ' ಜನಾಂಗವನ್ನು ವಿರೋಧಿಸುತ್ತಾನೆ ಆದರೆ ಹೂವಯ್ಯನಲ್ಲಿ ಹಿಂದೂ ಧರ್ಮದ ಅಸಮಾನತೆಯ ವಿರುದ್ಧ ಸಿಟ್ಟಿದೆ. ಆದರೆ ದ್ವೇಷವಿಲ್ಲ. ಹೀಗಾಗಿ ಹೂವಯ್ಯನ ಸಮಾಜ ಸುಧಾರಣಾ ಪ್ರಕ್ರಿಯೆಯಲ್ಲಿ ಜೊಯಿಸರ ಮಕ್ಕಳು, ಅಸ್ಪೃಶ್ಯರು ಭಾಗವಹಿಸುವುದನ್ನು ನೋಡಬಹುದು. ಮೂಲಭೂತ ಹಿಂದೂ ಧರ್ಮದ ಅಡಿಪಾಯದ ಮೇಲೆಯ ಬದುಕಿ ಅಲ್ಲಿನ ಅಸಮಾನತೆಯನ್ನು ಸಮಾಜಕ್ಕೆ ತೋರಿಸುವ, ಪರಿಹಾರವನ್ನು ಕಂಡುಕೊಳ್ಳುವ ಸಂಯಮ ಹೂವಯ್ಯನ ಪಾತ್ರದಲ್ಲಿ ವ್ಯಕ್ತವಾಗಿದೆ. ಕುವೆಂಪು ತಮ್ಮ

ಕಾದಂಬರಿಯ ರಚನೆಯ ಕಾಲದಲ್ಲಿ ಜೀತಪದ್ಧತಿಯ ಮುಕ್ತಿಗಾಗಿ ಅನೇಕ ಹೋರಾಟಗಳು ಪ್ರಾರಂಭವಾಗಿದ್ದವು. ಗಾಂಧೀ, ಅಂಬೇಡ್ಕರ್ ಮುಂತಾದ ಸುಧಾರಣಾವಾದಿಗಳು ಈ ನಿಟ್ಟಿನಲ್ಲಿ ಚಿಂತಿಸುತ್ತಿದ್ದರು. ಇವರ ಪ್ರೇರಣೇ ಪ್ರಭಾವಗಳಿಂದ ಕುವೆಂಪು ಅವರು ಸಹ ತಮ್ಮ ಕಾದಂಬರಿಗಳಲ್ಲಿ ಜೀತಪದ್ಧತಿಯ ನಾಶಕ್ಕಾಗಿ ಹೂವಯ್ಯ, ದೇವಯ್ಯನವರ ಪಾತ್ರಗಳ ಮೂಲಕ ಪ್ರಯತ್ನಿಸಿದ್ದಾರೆ. ಅವರೆಂದು ಈ ಪದ್ದತಿಗಳ ಪರವಾಗಿಲ್ಲ ಎಂಬುದನ್ನು ಮತೊಮ್ಮೆ ಹೇಳಬೇಕಾಗಿದೆ. ಈ ಕಾರಣಗಳಿಗಾಗಿ ಕುವೆಂಪುರವರ ಪ್ರತಿಭಟನೆಯ ಸ್ವರೂಪ ಇಬ್ಬಾಯಿಯದಲ್ಲ ಎಂಬುದನ್ನು ಗಮನಿಸಬಹುದು.

ಎಂ. ಜಿ. ಕೃಷ್ಣಮೂರ್ತಿ, ಬಿ. ಕೃಷ್ಣಪ್ಪ ಮತ್ತು ರಹಮತ್ ತರೀಕೆರೆ ಇವರು ಕುವೆಂಪು ತಮ್ಮ ಕಾದಂಬರಿಗಳ ದಲಿತ ಪಾತ್ರ ಚಿತ್ರಣದ ಸಂದರ್ಭದಲ್ಲಿ ಬಳಸಿರುವ ಭಾಷೆಯ ಬಗ್ಗೆ ಅಕ್ಷೇಪಣೆ ಮಾಡಿದ್ದಾರೆ. ಎಂ. ಜಿ. ಕೆಯವರು ಕಾದಂಬರಿಯಲ್ಲಿ ಹಲವು ಘಟನೆಗಳನ್ನು ವಿವರಿಸುವಾಗ ಕುವೆಂಪುರವರು ಬಳಸಿರುವ ಸಂಸ್ಕೃತ ಪದಗಳ ಬಗ್ಗೆ ಅಕ್ಷೇಪ ವ್ಯಕ್ತಪಡಿಸಿದ್ದಾರೆ. ಅವರು ಗುರುತಿಸಿರುವ ಸಂದರ್ಭಗಳು ಈ ಕೆಳಗಿನಂತಿವೆ. "........... ಅಡುಗೆ ಮನೆಯ ಒಂದು ಕಂಬಕ್ಕೆ ಬೆನ್ನು ಆನಿಸಿ ಚಿಕ್ಕಾಲು-ಬಕ್ಕಾಲು ಹಾಕಿ ಅರೆಗತ್ತಲಲ್ಲಿ ಕುಳಿತಿದ್ದ ಅಮ್ಮನ ತೊಡೆಯ ಮೇಲೆ ಮಲಗಿ ಮೃದು ಸಶಬ್ದವಾಗಿ ಮೊಲೆಯುಣ್ಣುತ್ತಿದ್ದ ಕಂದನ ಆನಂದವನ್ನು ಸಾಸಿರ್ಮಡಿಯಾಗಿ ಸವಿಯುತ್ತಾ ಸುಖ ಮೂರ್ಛೆಗೆ ಸದೃಶವಾದ ಚಿತ್ರಸ್ಥಿತಿಯಲ್ಲಿದ್ದ ಚೊಚ್ಚಲು ತಾಯಿ ದೇವಮ್ಮನ ಪ್ರಜ್ಞೆಗೆ ಹೊರಗಣ ಲೋಕದ ಕಠೋರತೆಯಾಗಲಿ ಕ್ರೌರ್ಯವಾಗಲಿ ತಮ್ಮ ತೀಕ್ಷ್ಣ ವಾಸ್ತವ ರೂಪದಲ್ಲಿ ಪ್ರವೇಶಿಸುವಂತಿರಲಿಲ್ಲ. ಕಾವ್ಯ ಪ್ರಪಂಚದಲ್ಲಿ ಯಾತ್ರಿಯಾಗುವ ರಸಾಸ್ವಾದಿ ಸಹೃದಯನ ಪ್ರಜ್ಞೆಗೆ ಸಂಭವಿಸುತ್ತದೆ ಎಂದು ಹೇಳಲಾಗುವ ಒಂದು ರೀತಿಯ ಸದ್ಯಃಪರವಾದ ನಿರ್ವೃತಿ ಅವಳ ಚೇತನವನ್ನು ತನ್ನ ವಕ್ಷ ಸ್ಥಳದಲ್ಲಿಟ್ಟುಕೊಂಡು ರಕ್ಷಿಸಿತ್ತು. ತನ್ನ ಜೀವನದ ಸಾರ ಸರ್ವಸ್ವವೇ ಬಹಿರ್ಭೂತವಾಗಿ ಮುದ್ದಿನ ಮುದ್ದೆಯಾದಂತಿದ್ದ ತನ್ನ ಕಂದನ ಮುದು ತುಟಿ ತನ್ನದೆಯ ಪೀಯೂಷಕಲಶದ ತೊಟ್ಟಿಗೆ ಸೋಕಿ ಅದನ್ನು ಚೀಪುತ್ತಿರುವಾಗ ಸಂಸಾರದ ಯಾವ ಕೋಟಲೆಯೂ ಅವಳ ರಸನಿದ್ರಾಸಮಾದಿಗೆ ಭಂಗ ತರಲು ಸಮರ್ಥವಾಗಿರಲಿಲ್ಲ. ಸಣ್ಣಬೀರನ ಸಂಕಟವಾಗಲಿ, ತನ್ನ ಗಂಡನ ಬಹು ಪ್ರಣಯಾಶಂಕೆಯಾಗಲಿ, ತನ್ನ ಹಳೆಮನೆ ಅಕ್ಕಯ್ಯನಿಗೆ ಒದಗಿದ್ದ ಮಹಾ ವಿಪತ್ತಾನ್ನಾಗಲಿ! ತಾಯಿ ಕೊಟ್ಟಳು ; ಮಗು ಈಂಟಿತು ; ಜಗತ್ತಿನ ಇತರ ಕರ್ಮಗಳೆಲ್ಲಾ ತತ್ಕಾಲದಲ್ಲಿ ಸ್ಥಗಿತ ಗೊಂಡಂತಿದ್ದವು. ವಿಶ್ವ ಗೌರವ ಭಾಜನವಾದ ಆ ಜಗದ್ ಭವ್ಯ ಘಟನೆಯ ಮುಂದೆ!" ೭

" ಆ ಮಂಗಳಕರವಾದ ಸುದದಿನವನ್ನೇ ಇದಿರು ನೋಡುತ್ತಾ ನಾಗಕ್ಕ, ಹರ್ಷಚಿತ್ತೆಯಾಗಿ ಆ ಪುಣ್ಯ ಮುಹೂರ್ತವನ್ನೇ ಉತ್ಕಟಾಭಿಲಾಷೆಯಿಂದ ನಿರೀಕ್ಷಿಸುವ ಉಲ್ಲಾಸೋತ್ಸಾಹಗಳಲ್ಲಿ ತೇಲಿ ಸಾಗುತ್ತಿದ್ದ ತರಳೆ ಚಿನ್ನಮ್ಮನ ದ್ವಿಗುಣಿತ , ತ್ರಿಗುಣಿತ, ಶತಗುಣಿತ ಆನಂದ ಸ್ರೋತದಲ್ಲಿ ಲೀನೆಯಾಗಿದ್ದಳು." (ಕುವೆಂಪು : ೧೯೯೨ : ೭೩೨)

" ಶರತ್ಕಾಲದ ಸರೋವರದಂತೆ ಪ್ರಶಾಂತ ಸುಂದರವಾಗಿದ್ದ ಚಿನ್ನಮ್ಮನ ವದನ ರಂಗದಲ್ಲಿ ಇದ್ದಕ್ಕಿಂದ್ದಮತೆಯೆ ಭಯವಿಕಾರದ ತರಂಗಗಳೆದ್ದುವು. ಚಳಿಗಾಲವಾಗಿದ್ದು ನೆರಳಿನಲ್ಲಿ ಕುಳಿತಿದ್ದು, ಕುಳಿರುಗಾಳಿ ಬೀಸುತ್ತಿದ್ದರೂ ಅವಳ ಹಣೆಯಲ್ಲಿ ಬೆವರಿನ ಹನಿ ಮೂಡಿದುವು. ಉಸಿರು ಸುಯ್ಯುಸಿರಾಯಿತು." ( ಕುವೆಂಪು : ೧೯೯೨ : ೭೩೮)

ಮೇಲಿನ ಭಾಗಗಳಂತೆ ಸಂಸ್ಕತ ಮಿಶ್ರಿತ ಕನ್ನಡ ಭಾಷಾ ಬಳಕೆಯ ಬಗ್ಗೆ ಅದರ ಅವಶ್ಯಕತೆ. ಸಾರ್ಥಕತೆಯ ಬಗ್ಗೆ ಎಂ. ಜಿ. ಕೆ ಯವರು ಪ್ರಶ್ನಿಸಿದ್ದಾರೆ. ಮೇಲಿನ ವಿವರಣೆಗಳಲ್ಲಿ ಬಳಸಿರುವ ಪದ ಪ್ರಯೋಗಗಳು ಸಾಮಾನ್ಯ ಓದುಗನ ಅನುಭವಗಳಾಗಲು ಸಾಧ್ಯವಾಗದಿರುವ ನಿಟ್ಟಿನಲ್ಲಿ ಎಂ. ಜಿ. ಕೆ ಯವರ ಪ್ರಶ್ನೆ ಉದ್ಭವಿಸುತ್ತದೆ. ಕುವೆಂಪುರವರ ಈ ರೀತಿಯ ವಿವರಗಳಿಗೆ ಪ್ರಾಚೀನ ಕವಿಗಳು ಶೃಂಗಾರವನ್ನು ವರ್ಣಿಸುವ ಸಂದರ್ಭದಲ್ಲಿ ಉಪಯೋಗಿಸುತ್ತಿದ್ದ ಸಂಸ್ಕತ ಭಾಷೆ ಮತ್ತು ಪದ ಪುಂಜಗಳ ಪ್ರಯೋಗವನ್ನು ತಮ್ಮ ಕಾದಂಬರಿಗಳಲ್ಲಿ ಮಾಡಿದ್ದಾರೆ ಎಂದು ಊಹಿಸಬಹುದು.

ಈ ರೀತಿಯ ಸಂಸ್ಕೃತ ಮಿಶ್ರಿತ ಕನ್ನಡ ಪದಗಳ ಬಳಕೆಯನ್ನು ಕುರಿತಾದ ಎಂ. ಜಿ. ಕೆ ಯವರ ಅಭಿಪ್ರಾಯ ಹೀಗಿದೆ. "........ಇಂತಹ ವ್ಯಾಖ್ಯಾನಗಳು ನೈಜದ ಆಚೆಗಿರುವ, ಆದರೆ ಬಾಳಿನ ಗೂಢತೆಯನ್ನು ಹೆಚ್ಚಿಸುವ ಅನುಭವಗಳನ್ನು ಓದುಗನ ಗಮನಕ್ಕೆ ತರಬೇಕಾದರೆ ಇಂತಹ ಅನುಭವಗಳಿಗೆ ಅಭಿವ್ಯಕ್ತಿಕೊಡುವ ರೀತಿಯ ಬಗೆಗಾಗಲೀ, ಅವುಗಳ ಮಹತ್ತಿನ ಬಗೆಗಾಗಲೀ ಶಂಕೆ ಬರುವಂತಿರಬಾರದು. ಅನುಭವಕ್ಕೆ ಅಭಿವ್ಯಕ್ತಿಕೊಡಲು ಅಥವಾ ಅದನ್ನು ವರ್ಣಿಸಲು ಉಪಯೋಗಿಸುವ ಪದ ಪುಂಜಗಳು ಕ್ಲೀಷೆಗಳು ಎನಿಸುವುದಕ್ಕೆ ಕಾರಣ ಉಪಯೋಗಿಸಿದ ಪದಗಳು ಹಳೆಯವು. ಸಂಸ್ಕೃತದಿಂದ ಬಂದವು ಎಂಬುದಲ್ಲ. ಇಂತಹ ಪದ ಪುಂಜಗಳು ಅನುಭವಕ್ಕೆ ಮತ್ತು ಭಾವಕ್ಕೆ ಅಭಿವ್ಯಕ್ತಿ ಕೊಡುವುದರಲ್ಲಿ ಸೋಲುತ್ತವೆ ಎಂಬುದು. ಅದರೆ ಕಾದಂಬರಿಯ ಇಪ್ಪತ್ತಮೂರನೇ ಅಧ್ಯಾಯದಲ್ಲಿ ತಿಮ್ಮಿ ನಿಸರ್ಗಕ್ಕೆ ತೋರಿಸುವ ಪ್ರಕ್ರಿಯೆಗಳನ್ನು ವರ್ಣಿಸುವ 'ಗ್ರಾಮೀಣ' ಭಾಷೆಯಂತೆ. ಇಂತಹ ವಿಶಿಷ್ಟ ಭಾಷೆ ಸೃಷ್ಟಿಶೀಲವಾಗುವುದಿಲ್ಲ."೮ ಎಂಬ ಎಂ. ಜಿ. ಕೆ ಯವರ ಹೇಳಿಕೆಯ ಒಟ್ಟು ಸಾರಾಂಶವೆಂದರೆ, ಕಾದಂಬರಿಗಳಲ್ಲಿ ಬಳಕೆಯಾಗಿರುವ 'ಗ್ರಾಮೀಣ'ಭಾಷೆ ಅಥವಾ ಪ್ರಾದೇಶಿಕ ಭಾಷೆ ಕಾದಂಬರಿಯಲ್ಲಿ ಗೆಲ್ಲುತ್ತದೆ. ಸಂಸ್ಕೃತ ಮಿಶ್ರಿತ ಕನ್ನಡ ಭಾಷಾ ಬಳಕೆಯ ಪ್ರಸಂಗಗಳು ಭಾಷೆಯ ದೃಷ್ಟಿಯಿಂದ ಸೋಲುತ್ತವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಗುತ್ತಿ–ತಿಮ್ಮಿ, ಐತ–ಪಿಂಚಲು, ನಾಗಕ್ಕ–ನಾಗತ್ತೆ, ಮೊದಲಾದ ಪಾತ್ರ ಚಿತ್ರಣಗಳಲ್ಲಿ, ಆ ಪಾತ್ರಗಳ ಸಂಭಾಷಣೆಯ ಸಂದರ್ಭಗಳಲ್ಲಿ ಉಲ್ಲೇಖವಾಗಿರುವ ಭಾಷೆ ಕಾದಂಬರಿಗೆ ಪೂರಕವಾಗಿದೆ. ಅದೇ ರೀತಿ ಮುಕುಂದಯ್ಯ ಚಿನ್ನಮ್ಮನ ಪ್ರಣಯ ಸಂದರ್ಭದ ಹಾಗೂ ದೇವಮ್ಮ ಮಗುವಿಗೆ ಹಾಲು ನೀಡುವ ಸಂದರ್ಭಗಳಲ್ಲಿ ಉಲ್ಲೇಖವಾಗಿರುವ ಭಾಷೆ ಕಾದಂಬರಿಯ ಪ್ರಾದೇಶಿಕತೆಯ ದೃಷ್ಟಿಯಿಂದ ಸೋಲುತ್ತದೆ. ಎಂಬ ಎಂ. ಜಿ. ಕೆ ಯವರ ಅಭಿಪ್ರಾಯ ಸಮಂಜಸತವಾದುದಲ್ಲ. ಏಕೆಂದರೆ ಇದು ಕುವೆಂಪುರವರ ದೌರ್ಬಲ್ಯವಲ್ಲ. ಸೃಜನಶೀಲ ಪ್ರಕ್ರಿಯೆಯಲ್ಲಿ ಸಂದರ್ಭಕ್ಕೆ ತಕ್ಕಂತೆ ಹದವರಿತು ವರ್ಣಿಸುವ ಅಪರವಾದ ಪ್ರತಿಭೆಯನ್ನು ಹೊಂದಿರುವ ಕುವೆಂಪುರವರ ಭಾಷಾ ಬಳಕೆಯ ಪ್ರತಿಭಾಶಕ್ತಿಯೇ ಇದಕ್ಕೆ ಕಾರಣ ಎಂದು ಹೇಳಬಹುದು.

ಇಲ್ಲಿ ಎಂ. ಜಿ. ಕೃಷ್ಣಮೂರ್ತಿಯವರು ದೇವಮ್ಮನು ಮಗುವಿಗೆ ಹಾಲು ಕುಡಿಸುವ ಸಂದರ್ಭವನ್ನು ವಿವರಿಸುವಾಗ ಕುವೆಂಪುರವರು ಸಂಸ್ಕೃತ ಭೂಯಿಷ್ಟವಾದ ಭಾಷೆಯನ್ನು ಬಳಸಿದ್ದಾರೆ. ಎಂದು ಅಕ್ಷೇಪಣೆ ಮಾಡಿದ್ದಾರೆ. ಆದರೆ ಕುವೆಂಪುರವರು ಈ ಸಂದರ್ಭದಲ್ಲಿ ದೇವಮ್ಮನ ಮನಃಸ್ಥಿತಿಯನ್ನು ವರ್ಣಿಸಲು ಅವಳ ಮಾತೃತ್ವದ ಆನಂದವನ್ನು ಅಭಿವ್ಯಕ್ತಿಸಲು ಮತ್ತು ಇದೇ ಸಮಯದಲ್ಲಿ ಅವಳ ಗಂಡನ ತಂದೆ ಬೆಟ್ಟಳ್ಳಿ ಕಲ್ಲಯ್ಯ ಗೌಡರು ಆ ದೊಡ್ಡ ಮನೆಯ ಅಂಗಳದಲ್ಲಿ 'ಸಣ್ಣ ಬೀರ' ಎಂಬ ದಲಿತ ಯುವಕನನ್ನು ದಂಡಿಸುತ್ತಿರುವ ಸನ್ನಿವೇಶವು ದೇವಮ್ಮನ ಪ್ರಪಂಚಕ್ಕೆ ಬಹಳ 'ದೂರ'ದಲ್ಲಿತ್ತು ಎಂಬುದನ್ನು ಸೂಚಿಸಲು ಇಲ್ಲಿ ಭಾಷೆಯು ಒಂದು ಸಾಧನವಾಗಿ ಒದಗಿಬಂದಿದೆ.

ಕುವೆಂಪು ಈ ಸಂದರ್ಭದಲ್ಲಿ ಇಜಾರದ ಸಾಬಿಯು ಸಣ್ಣ ಬೀರನನ್ನು ದಂಡಿಸುವ ವಿವರಗಳನ್ನು ನೀಡುವ ಸಂದರ್ಭದಲ್ಲಿ ಬಳಸುವ ಭಾಷೆಯು ದೇವಮ್ಮನ ಮಾತೃತ್ವದ ಅನುಭೂತಿಯನ್ನು ವಿವರಿಸುವಾಗ ಬಳಸುವ ಭಾಷೆಗೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ಕಾದಂಬರಿಕಾರರ ಉದ್ದೇಶ ಸ್ಪಷ್ಟವಾಗುತ್ತದೆ. ಈ ಸನ್ನಿವೇಶದಲ್ಲಿಯೇ ಹೊರಗಿನ ಅಂಗಳದಲ್ಲಿ ಸೇಸಿಯಂತಹ ಅನಕ್ಷರಸ್ತ ತಾಯಿಯು ಕೂಡ ತನ್ನ ಮಗ ಸಣ್ಣ ಬೀರನನ್ನು ಕಾಪಾಡಿಕೊಳ್ಳಲು ಜಮೀನ್ದಾರರ ಎದುರು ನಿಂತು ಮಗನ ಪರವಾಗಿ ಮಾತನಾಡುವ ಧೈರ್ಯವನ್ನು ತೋರಿಸುತ್ತಾಳೆ. ಹೀಗೆ ಭಿನ್ನಸ್ತರದ ಸ್ತ್ರೀಯರಿಬ್ಬರ ಮಾತೃತ್ವದ ಹಿರಿಮೆಯನ್ನು ಏಕ ಕಾಲದಲ್ಲಿ ವಿವರಿಸುವುದು ಆ ಮೂಲಕ ಆ ಇಬ್ಬರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಭಿನ್ನತೆಗಳನ್ನು ಸೂಚಿಸಿ ಇವೆಲ್ಲವೂಗಳ ನಡುವೆಯು ಮಾತೃತ್ವವೆಂಬುದು ಇಬ್ಬರಿಗೂ ಸಮಾನ ಮಹತ್ವದ

ಅನುಭವ ಎಂದು ಕಾದಂಬರಿಯ ಈ ಸನ್ನಿವೇಶಗಳಲ್ಲಿ ಬಳಸಿದ ಭಾಷಾಪ್ರೌಢಿಮೆಯಿಂದಲೇ ಸೂಚಿತವಾಗುತ್ತದೆ. ಪಾತ್ರಗಳ ಸಂಭಾಷಣೆಯು ಸಂದರ್ಭದಲ್ಲಿ ಉಲ್ಲೇಖವಾಗಿರುವ ಭಾಷೆ ಕಾದಂಬರಿಗೆ ಪೂರಕವಾಗಿದೆ. ಅದೇರೀತಿ ಮುಕುಂದಯ್ಯ ಚಿನ್ನಮ್ಮನ ಪ್ರಣಯ ಸಂದರ್ಭದ ಹಾಗೂ ದೇವಮ್ಮ ಮಗುವಿಗೆ ಹಾಲು ನೀಡುವ ಸಂದರ್ಭಗಳಲ್ಲಿ ಉಲ್ಲೇಖವಾಗಿರುವ ಭಾಷೆ ಕಾದಂಬರಿಯ ಪ್ರಾದೇಶಿಕತೆಯ ದೃಷ್ಟಿಯಿಂದ ಸೋಲುತ್ತದೆ. ಎಂಬ ಎಂ. ಜಿ. ಕೆಯವರ ಅಭಿಪ್ರಾಯ ಸಮಂಜಸವಾದುದಲ್ಲ. ಏಕೆಂದರೆ ಇದು ಕುವೆಂಪುರವರ ದೌರ್ಜಲ್ಯವಲ್ಲ. ಸೃಜನಶೀಲ ಪ್ರಕ್ರಿಯೆಯಲ್ಲಿ ಸಂದರ್ಭಕ್ಕೆ ತಕ್ಕಂತೆ ಹದವರಿತು ವರ್ಣಿಸುವ ಅಪಾರವಾದ ಪ್ರತಿಭೆಯನ್ನು ಹೊಂದಿರುವ ಕುವೆಂಪುರವರ ಭಾಷಾ ಬಳಕೆಯ ಪ್ರತಿಭಾಶಕ್ತಿಯೇ ಇದಕ್ಕೆ ಕಾರಣ ಎಂದು ಹೇಳಬಹುದು

ಬಿ. ಕೃಷ್ಣಪ್ಪನವರು ಕುವೆಂಪು ತಮ್ಮ ಕಾದಂಬರಿಗಳಲ್ಲಿ ದಲಿತ ಹೆಣ್ಣುಗಳ ಚಿತ್ರಣ ಹಾಗೂ ಭೂಮಾಲಿಕ ಗಂಡಸರ ಚಿತ್ರಣಗಳಲ್ಲಿ ತೋರಿಸುವ ಭಾಷಾ ತಾರತಮ್ಯ ಹಾಗೂ ಉಪಮೆಗಳ ಬಳಕೆಯಲ್ಲಿನ ತಾರತಮ್ಯಗಳನ್ನು ವಿರೋಧಿಸಿದ್ದಾರೆ. ಹೀಗೆ ವಿರೋಧ ವ್ಯಕ್ತಪಡಿಸಲು ಕೃಷ್ಣಪ್ಪನವರು ಕುವೆಂಪು ಕಾದಂಬರಿಗಳಲ್ಲಿನ ಪ್ರಸಂಗಗಳನ್ನು ಗುರುತಿಸುತ್ತಾರೆ. ಜೀತ, ಉಳಿಗಮಾನ್ಯ ಪದ್ದತಿಯ ಶೋಷಣೆ. ಭೂಮಾಲಿಕರು ಹೊಟ್ಟೆ ಪಾಡಿಗಾಗಿ ದುಡಿಯುವ ದಲಿತ ಹೆಣ್ಣು ಮಕ್ಕಳನ್ನು ಲೈಂಗಿಕವಾಗಿ ಶೋಷಿಸುವ ಚಿತ್ರಣಗಳು ಕುವೆಂಪು ಕಾದಂಬರಿಯಲ್ಲಿ ದಾಖಲಾಗಿವೆ. ಕುಳವಾಡಿ ಸಣ್ಣನ ಮಗಳು ಪುಟ್ಟಿಯನ್ನು ತಿಮ್ಮಪ್ಪ ಹೆಗಡೆ ಆತ್ಯಾಚಾರ ಮಾಡಿದ ಸಂದರ್ಭದಲ್ಲಿ ಕುವೆಂಪುರವರು ಬಳಸುವ ಪದ ಪ್ರಯೋಗವನ್ನು ದಲಿತ ಚಿಂತಕರು ಖಂಡಿಸಿದ್ದಾರೆ. ಕುವೆಂಪು ಇಲ್ಲಿ ಕುರೂಪಿಯಾದ ತಿಮ್ಮಪ್ಪ ಹೆಗ್ಗಡೆಯನ್ನು ಶುಚಿಯಾದ ಚೀನಿ ನಾಯಿಗೂ ಅವನು ಬಳಸುವ ದಲಿತ ಹೆಣ್ಣುಗಳನ್ನು 'ದದ್ದು' ಹಿಡಿದ ಬೀದಿ ನಾಯಿಗಳಿಗೆ ಹೋಲಿಸುತ್ತಾರೆ. ಈ ತಾರತಮ್ಯ ನೀತಿಯನ್ನು ಬಿ. ಕೃಷ್ಣಪ್ಪನವರು ಕಾದಂಬರಿಯ ಇನ್ನು ಹಲವು ಸಂದರ್ಭಗಳಲ್ಲಿ ಗುರುತಿಸಿದ್ದಾರೆ. "........ತನ್ನ ವರ್ಗಕ್ಕೆ ಸೇರದಿರುವ ಮತ್ತೊಂದು ಸ್ಫುರದ್ರೂಪಿಗಂಡು ಪ್ರಾಣಿಯನ್ನೊ, ಒಂದು ಮನೋಹರವಾದ ಪಕ್ಷಿಯನ್ನೊ, ಒಂದು ಸುಲಕ್ಷಣವಾದ ಅಂಕದ ಕೋಳಿ ಹುಂಜನನ್ನೊ, ಒಂದು ಸುಪುಷ್ಪವಾದ ಸುಂದರ ಗೂಳಿಯನ್ನೊ, ನೋಡುವುದರಲ್ಲಿ ತಪ್ಪೇನು ? ಅಸ್ಪೃಶ್ಯನಾದ ಹೊಲೆಯ ಮನುಷ್ಯ ಜಾತಿಯವನಾಗಿದ್ದರೂ ತನ್ನ ಜಾತಿಯು ಅಲ್ಲದೆ, ತನಗೆ ಸರಿಸಮಾನವಾದ ಜಾತಿಯು ಅಲ್ಲದೆ, ಅತ್ಯಂತ ಕೊನೆಯ ಕೀಳು ಜಾತಿಯವನಾಗಿದ್ದದ್ದರಿಂದ ಹರೆ ಹರೆಯ ಕೊಂಬಿನ ಚಲುವಿನ ಹೋರಿ ಮಿಗವನ್ನು ಮೆಚ್ಚಿ ನೋಡುವಂತೆ ನೋಡಿದಳು. ತನಗೂ ಅವನಿಗೂ ಮಾನವೀಯ ಗಂಡು ಹೆಣ್ಣಿನ ಸಂಬಂಧ ಭಾವನೆಯ ಸುಳಿವೂ ಸರ್ವಥಾ ಅಸಂಭವ, ನಿಸರ್ಗ ವಿರುದ್ಧ, ಅಸ್ವಾಭಾವಿಕ, ಅಸಾಧ್ಯ ಎಂಬ ಪ್ರಚ್ಛನ್ನ ಧೈರ್ಯ ಅವಳ ನೋಟಕ್ಕೆ ನಿಸ್ಸಂಕೋಚತೆಯೀಯುವ ಧರ್ಮ ರಕ್ಷೆಯಾಗಿತ್ತು."[೯] ಕುವೆಂಪುರವರು ಮೇಲಿನ ಹೇಳಿಕೆಯಲ್ಲಿ ಕೀಳು ಜಾತಿಯವನಾದ ಗುತ್ತಿಗೂ ಮೆಲ್ಜಾತಿಯ ಕಾವೇರಿಗೂ ಗಂಡು-ಹೆಣ್ಣಿನ ಸಂಬಂಧ ಸರ್ವಥಾ ಅಸಂಭವ, ನಿಸರ್ಗ ವಿರುದ್ಧ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯಕ್ಕೂ ಮುಂದೆ ವಿವರಿಸುವ ಘಟನೆಗೂ ವಿರೋಧಾಬಾಸಗಳಿರುವುದನ್ನು ಕೃಷ್ಣಪ್ಪನವರು ಪ್ರಶ್ನಿಸಿತ್ತಾರೆ. "ನಾರಾಯಣ ಭಟ್ಟನ ಹೆಂತಿಯ ಪಕ್ಕದಲ್ಲಿ ಕುಳಿತಿದ್ದು ಐತಾಳನ ಹೆಂಡತಿಯಂತೂ, ತನ್ನ ತೋಟಾ ಕೋವಿಯನ್ನು ಒಂದು ಮೂಲೆಯಲ್ಲಿ ಕಲ್ಲು ಕಂಬಕ್ಕೆ ಒರಗಿಸಿಟ್ಟು, ಮುಕುಂದಯ್ಯನನ್ನು ಹಿಂಬಾಲಿಸಿ, ಶೂದ್ರಗಂಡಸರು ಕುಳಿತಿದ್ದೆಡೆಗೆ ನಡೆದು ದೇವಯ್ಯ ಅವರ ನಡುವೆ ಕುಳಿತುಕೊಳ್ಳುವವರೆಗೂ ಅವನತ್ತ ಇಟ್ಟಿದ್ದ ದೃಷ್ಟಿಯನ್ನು ಇತ್ತ ತಿರುಗಿಸಿರಲಿಲ್ಲ. ಆ ಮೇಲೆಯೂ ಏನಾದರೊಂದು ನೆವಮಾಡಿಕೊಂಡು ಮತ್ತೆ ಮತ್ತೆ ಅವನತ್ತ ಕಣ್ಣು ಹಾಕುತ್ತಲೆ ಇದ್ದಳು. ಒಮ್ಮೆ ಹಾರುವ ಗಂಡಸರ ನಡುವೆ ಕುಳಿತಿದ್ದ ನಾರಾಯಣ ಭಟ್ಟನು ಎದ್ದು ದೇವಯ್ಯನ ಪಕ್ಕದಲ್ಲಿ ತುದಿಗಾಲಿನ ಮೇಲೆಯೆ ಕುಳಿತು ಸಂಭಾಷಿಸುತ್ತಿದ್ದಾಗಲಂತೂ

ಅವರಿಬ್ಬರಿಗಿದ್ದ ತಾರತಮ್ಯವನ್ನು ಚೆನ್ನಾಗಿ ಗಮನಿಸಿದ್ದಳು. ನಾರಾಯಣ ಭಟ್ಟನೂ ದೇವಯ್ಯನ ಹಾಗೆ ಕ್ರಾಮು ಬಿಟ್ಟಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ? ಎಂದುಕೊಂಡಿದ್ದಳು ಅವಳು".೧೦ ಮೇಲಿನ ಎರಡು ಘಟನೆಗಳ ವಿವರಣೆಯಲ್ಲಿರುವ ತಾರತಮ್ಯವನ್ನು ಕೃಷ್ಣಪ್ಪನವರು ಗುರುತಿಸುತ್ತಾರೆ. ಮೆಲ್ಜಾತಿ ಹೆಣ್ಣೊಬ್ಬಳು ದಲಿತ ಯುವಕನೊಬ್ಬನನ್ನು ನೋಡುವಾಗ ಅದು ನಿಸರ್ಗಕ್ಕೆ ವಿರೋಧವಾಗಿ ಕಾಣುತ್ತದೆ. ಅದೇ ಬ್ರಾಹ್ಮಣ ಹೆಣ್ಣೊಬ್ಬಳು ಗೌಡರ ಯುವಕನನ್ನೊಬ್ಬನನ್ನು ನೋಡುವಾಗ ಆಕೆಯ ದೃಷ್ಟಿಯಲ್ಲಿ ಅದು ನಿಸರ್ಗಕ್ಕೆ ವಿರೋಧವಾಗಿ ಕಾಣಿಸುವುದಿಲ್ಲ. ಇಂತಹ ತಾರತಮ್ಯ ನೀತಿಯನ್ನು ಕುವೆಂಪುರವರು ತಮ್ಮ ಕಾದಂಬರಿಯಲ್ಲಿ ಮಾಡಿದ್ದಾರೆ. ಎಂಬ ಗಂಭೀರವಾದ ಅಕ್ಷೇಪಣೆಯನ್ನು ಕೃಷ್ಣಪ್ಪನವರು ಮಾಡಿದ್ದಾರೆ. ವಾಸ್ತವವಾಗಿ ಕುವೆಂಪುರವರು ಮೇಲಿನ ಎರಡು ಸಂದರ್ಭದಲ್ಲಿ ಸ್ತ್ರೀಸಹಜ ಅಕರ್ಷಣೆಯನ್ನು ಚಿತ್ರಿಸಿದ್ದಾರೆ. ಕಾವೇರಿಗೆ ಗುತ್ತಿಯನ್ನು ನೋಡಿದ ತಕ್ಷಣ ಅವಳಿಗೆ ಪರಂಪರೆ ಭಿತ್ತಿದ ಜಾತಿಯ ಕಲ್ಪನೆ ಅವಳನ್ನು ಎಚ್ಚರಿಸುತ್ತದೆ. ಅಂದಿನ ಸಂದರ್ಭದಲ್ಲಿ ಭೂಮಾಲೀಕರು ದಲಿತರನ್ನು ಪಶುಗಳಿಗಿಂತ ಕಡೆಯಾಗಿ ನಡೆಸಿಕೊಳ್ಳುತ್ತಿದ್ದರು ಎಂಬುದನ್ನು ಗಮನಿಸಿದರೆ ಈ ರೀತಿಯ ಉಪಮೆ ವಿಮರ್ಶಕರಲ್ಲಿ ಆಶ್ಚರ್ಯವನ್ನುಂಟು ಮಾಡುವುದಿಲ್ಲ. ಕಾವೇರಿಗೆ ಗುತ್ತಿಯ ಬಗ್ಗೆ ತಿರಸ್ಕಾರ ಮನೋಭಾವವಿಲ್ಲ ಅವಳು ಅವನಲ್ಲಿ ಒಂದು ಸುಂದರ ಪಕ್ಷಿ, ಸುಲಕ್ಷಣವಾದ ಕೋಳಿಹುಂಜ, ಸುಪುಷ್ಟವಾದ ಸುಂದರ ಗೂಳಿಯ ಕಲ್ಪನೆ ಅವಳಲ್ಲಿ ಮೂಡುತ್ತದೆ. ಒಟ್ಟಿನಲ್ಲಿ ಅವಳು ಗುತ್ತಿಯಲ್ಲಿ ಸುಂದರವಾಗಿರುವ ಒಂದು ರೂಪವನ್ನು ಕಾಣುತ್ತಾಳೆ. ಹಾಗೆಯೆ ಐತಾಳನ ಹೆಂಡತಿಯು ಸಹ ದೇವಯ್ಯನ ಕ್ರಾಪು, ಉಡುಗೆ-ತೊಡುಗೆ ಇವುಗಳ ಬಗ್ಗೆ ಆಕರ್ಷಿತಳಾಗುವುದು ಆಶ್ಚರ್ಯವಲ್ಲ.

ರಹಮತ್ ತರೀಕೆರಯವರು ಕುವೆಂಪುರವರು ದಲಿತ ಹೆಣ್ಣುಗಳನ್ನು ದದ್ದು ಹಿಡಿದ ಬೀದಿ ನಾಯಿಗಳಿಗೆ ಹೋಲಿಸಿರುವುದಕ್ಕೆ ಕೆಳಗಿನಂತೆ ಪ್ರತಿಕ್ರಿಯಿಸುತ್ತಾರೆ."ಕುವೆಂಪು ಅವರಂಥ ಲೇಖಕನನ್ನು ಬಿಡದೆ ಬೆನ್ನು ಹತ್ತುವ ಭಾಷೆಯೊಳಗಿನ ಈ ಸಾಮಾಜಿಕ ಗ್ರಹಿಕೆಗಳು ನಮ್ಮ ಸಂಸ್ಕೃತಿಯಲ್ಲಿ ಇಷ್ಟೊಂದು ಆಳವಾಗಿ ಬೇರಿಳಿಸಿರುವುದು. ಇವು ಗಳಿಂದ ಬಿಡಿಸಿಕೊಳ್ಳುವುದು ಹೇಗೆಂದು ಸೂಕ್ಷ್ಮವಾಗಿ ಗಂಭೀರವಾಗಿ ಯೋಚಿಸ ತಕ್ಕದ್ದಿದೆ." (ರಹಮತ್ ತರೀಕೆರೆ : ೧೯೯೩:೧೩೧) ಮೇಲಿನ ಹೇಳಿಕೆಯು ಸಹ ಕುವೆಂಪುರವರು ಬಳಸಿರುವ ಉಪಮೆಯ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸುವುದನ್ನು ನೋಡಬಹುದು. ಇದು ಕುವೆಂಪು ಅವರು ಪ್ರಜ್ಞಾ ಪೂರ್ವಕವಾಗಿ ಎಸಗಿದ ತಪ್ಪಲ್ಲ ಎಂಬುದನ್ನು ಹಲವು ವಿದ್ವಾಸಂರು ಗುರುತಿಸಿದ್ದಾರೆ.

ದಲಿತ ಬದುಕಿನ ವಾಸ್ತವ ಚಿತ್ರಣವನ್ನು ನೀಡುವ ಭರದಲ್ಲಿ ಕುವೆಂಪುರವರ ಮೇಲಿನ ಉಪಮೆಯನ್ನು ಬಳಸಿದ್ದಾರೆ. ಕುವೆಂಪು ಕಾದಂಬರಿಗಳ ಸಂದರ್ಭದಲ್ಲಿನ ದಲಿತ ಮಹಿಳೆರ ಜೀವನ ಅತ್ಯಂತ ಹೀನಾಯವಾಗಿತ್ತು. ಎಂಬುದನ್ನು ಸ್ಪಷ್ಟಪಡಿಸಲು ಮೇಲಿನ ಪದ ಪ್ರಯೋಗವಾಗಿರಬಹುದು. ಇಷ್ಟಕ್ಕೆ ಕುವೆಂಪುರವರು ದಲಿತ ವಿರೋಧಿ ಎಂಬ ಹಣೆ ಪಟ್ಟಿ ಕಟ್ಟುವುದು ಸೂಕ್ತವಲ್ಲ. ಭೂಮಾಲಿಕರ ಕುರಿತಾದ ಕುವೆಂಪುರವರ ನಿಲುವು ಎನೇ ಇದ್ದಾರೂ, ಅದೂ ಖಂಡಿತವಾಗಿ ಭೂಮಾಲಿಕರ ಪರವಾಗಿರದೆ. ಅದು ಶೋಷಿತ ಜನಾಂಗದ ಪರವಾಗಿದೆ ಎಂಬುದನ್ನು ವಾಚಕರು ಗಮನಿಸಬೇಕು. ತಿಮ್ಮಪ್ಪ ಹೆಗ್ಗಡೆಯ ನೀಚತನವನ್ನು ದಲಿತರ ಮೂಲಕ ಬಯಲಿಗೆಳೆದು ಹಳಿಯವುದರಿಂದ ಈತ ನೀತಿಯಲ್ಲಿ ದಲಿತರಿಗಿಂತ ಕೀಳು ಎಂಬುದಾಗಿ ಸೂಚಿಸಿದ್ದಾರೆ. ಇದೇ ರೀತಿ ಕಾನೂರಿನ ಮನೆ ಪಾಲಾಗುವ ಸಂದರ್ಭದಲ್ಲಿ ಪಂಚಾಯಿತಿಗೆ ಬಂದ ಪ್ರಮುಖರನ್ನು ದಲಿತರು ಹೀಗೆ ಗುರುತಿಸುತ್ತಾರೆ. "ಹುಡ್ಗಿ ಹಾರಿಸಿದ ಅಂತಾ ಕೇಸಾಗಿತ್ತಲ್ಲಾ ಅವರೇ ಏನ್ರೋ ?" (ಕುವೆಂಪು:೨೦೦೪:೩೦೬) ಎಂದು ಗುರ್ತಿಸುತ್ತಾರೆ. ಇಲ್ಲಿ ಕುವೆಂಪುರವರು ಉಳಿಗಮಾನ್ಯ

ವ್ಯವಸ್ಥೆಯ ಪರವಾಗಿರದೆ ಅವರ ಅನ್ಯಾಯ, ಶೋಷಣೆ ಇವುಗಳನ್ನು ಬಯಲು ಮಾಡಿದ್ದಾರೆ. ಕುವೆಂಪು ತಮ್ಮ ಕಾದಂಬರಿಗಳಲ್ಲಿ ಒಕ್ಕಲಿಗರ ಸಮಗ್ರ ಜೀವನವನ್ನು, ಅವರ ಶೋಷಣೆಯ ವಿಧಾನಗಳನ್ನು ಬಯಲು ಮಾಡಿದ್ದಕ್ಕಾಗಿ ಮಲೆನಾಡಿನ ಅನೇಕ ಒಕ್ಕಲಿಗ ಸಮುದಾಯದವರು ಕುವೆಂಪು ಅವರನ್ನು ವಿರೋಧಿಸುತ್ತಿದ್ದರು ಎಂಬ ಮಾತಿದೆ.

ಧರಣೀದೇವಿ ಮಾಲಗತ್ತಿಯವರು ಕುವೆಂಪು ಕಾದಂಬರಿಗಳಲ್ಲಿನ ಧಮನಿತ ಚಿತ್ರಣದ ಸ್ವರೂಪದ ಬಗ್ಗೆ ಆರೋಪ ಮಾಡಿದ್ದಾರೆ. ಕುವೆಂಪು ಅವರಲ್ಲಿ ಶೂದ್ರ ವರ್ಗಕ್ಕೆ ಬಂದು ಅನುಕರಣೀಯ ಮಾದರಿಯಾಗಿ ಹೂವಯ್ಯನ ಪಾತ್ರವನ್ನು ಸೃಷ್ಟಿಸಿದ್ದಾರೆ. ಆದರೆ ಶೂದ್ರೇತರ ವರ್ಗಗಳಲ್ಲಿ ಇಂಥ ಮಾದರಿಯ ಪಾತ್ರ ಚಿತ್ರಣ ಇಲ್ಲದೇ ಇರುವುದನ್ನು ಗುರುತಿಸುತ್ತಾರೆ. ಅದೇ ರೀತಿ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಪ್ರಾರಂಭದಲ್ಲಿ ಉಲ್ಲೇಖಗೊಂಡಿರುವ 'ಇಲ್ಲಿ ಯಾರು ಮುಖ್ಯರಲ್ಲ, ಯಾರು ಅಮುಖ್ಯರಲ್ಲ. ಯಾವುದೂ ಯಃಕಶ್ಚಿತವಲ್ಲ.........' ಎಂಬ ಹೇಳಿಕೆಯ ವಿರೋಧಾಭಾಸವನ್ನು ಗುರುತಿಸಿದ್ದಾರೆ. ಒಂದು ಕಾದಂಬರಿ ಪರಿಪೂರ್ಣವಾಗಿ ಬೆಳೆಯಬೇಕಾದರೆ ಅಲ್ಲಿ ಒಂದು ಕೇಂದ್ರ ಪಾತ್ರದ ಜೊತೆಗೆ ಇತರ ಪೂರಕ ಪಾತ್ರಗಳ ಸಹಾಯವುಬೇಕು ಎಂಬುದು ಧರಣೀದೇವಿಯವರ ಅಭಿಪ್ರಾಯ. ಕಾದಂಬರಿಯ ಪ್ರಾರಂಭದಲ್ಲಿ ಮೇಲಿನಂತೆ ಹೇಳಿ ಮಲೆನಾಡಿನ ಕೇಂದ್ರ ಕಥೆಯನ್ನು, ಅಲ್ಲಿನ ಜೀವನ ಪದ್ಧತಿಯನ್ನು ಪ್ರಧಾನವಾಗಿ ಗುರುತಿಸಿರುವುದನ್ನು ನೋಡಬಹುದು. ಕೃತಿಯ ಕೇಂದ್ರ ಪಾತ್ರಗಳ ಜೀವನವೇ ಮಲೆನಾಡಿನ ಜೀವನವಾಗುತ್ತದೆ.

ಕುವೆಂಪು ಕಾದಂಬರಿಗಳನ್ನು ಕುರಿತಾದ ಧರಣೀದೇವಿ ಅವರ ಪ್ರಮುಖವಾದ ಪ್ರಶ್ನೆ ಎಂದರೆ "ಕುವೆಂಪುರವರು ದಲಿತ ಪಾತ್ರಗಳ ಬಗೆಗೆ ತುಂಬು ಅನುಕಂಪದಿಂದ ವ್ಯವಹರಿಸುತ್ತಾರೆ. ಆ ಪಾತ್ರಗಳ ಸ್ವಾಮಿನಿಷ್ಠೆ ಅಥವಾ ಭಯ ಭಕ್ತಿ ಅಥವಾ ಅಸಹಾಯಕತೆಯ ಮೂರ್ತರೂಪಗಳು ಕೆಲವು ಶೂದ್ರ ಪಾತ್ರಗಳಲ್ಲಿ ಬರುವ ಸತ್ವ ಪ್ರಜ್ಞಾಪೂರ್ವಕ ಸ್ವಂತ ಅಸ್ತಿತ್ವದ ಕಲ್ಪನೆ ಅವುಗಳಿಗಿದ್ದ ಹಾಗೆ ಕಾಣುವುದಿಲ್ಲ. " (ಧರಣಿದೇವಿ ಮಾಲಗತ್ತಿ : ೨೦೦೫ : ೨೪೨) ಎಂಬ ಆರೋಪ ಮಾಡಿದ್ದಾರೆ.

ಮೇಲಿನ ಆರೋಪಕ್ಕೆ ಪೂರಕವಾಗಿ ಬಿ. ಕೃಷ್ಣಪ್ಪನವರು ಮಾಡಿರುವ ಆಕ್ಷೇಪಣೆಯನ್ನು ನೋಬಹುದು. " ದಲಿತ ಪಾತ್ರಗಳು ಕೇವಲ ಹೆಂಡ-ಮಾಂಸ-ಕಾಮ ಇತ್ಯಾದಿ ಮಣ್ಣಿನ ಸ್ಥಿರದಲ್ಲಿಯೆ ಬದುಕಿ ಪ್ರತಿಭಟಿಸದೆ, ಘರ್ಷಿಸದೆ ಅರ್ಥೈಸಿಕೊಳ್ಳದೆ ಹೋಗುತ್ತವೆ." (ಬಿ. ಕೃಷ್ಣಪ್ಪ : ೨೦೦೨ : ೭೨) ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಮೇಲಿನ ಎರಡು ಆರೋಪಗಳು ಹುರುಳಿಲ್ಲದ್ದು. ಏಕೆಂದರೆ ದಲಿತ ಪಾತ್ರಗಳು ಕುವೆಂಪು ಕಾದಂಬರಿಗಳಲ್ಲಿ ಅನೇಕ ಸಂದರ್ಭಗಳಲ್ಲಿ ವ್ಯವಸ್ಥೆಯ ವಿರುದ್ಧ ತನಗೆ ಆದ ಅನ್ಯಾಯದ ವಿರುದ್ಧ, ಪ್ರತಿಭಟಿಸುವ ವ್ಯವಸ್ಥೆಯ ವಿರುದ್ದ ಘರ್ಷಿಸುವ ಅನೇಕ ಘಟನೆಗಳು ಕಾದಂಬರಿಯಲ್ಲಿ ದಾಖಲಾಗಿದೆ.

ತಿಮ್ಮಿ ಬಚ್ಚನನ್ನು ತಿರಸ್ಕರಿಸಿ ಗುತ್ತಿಯೊಡನೆ ಓಡಿ ಹೋಗುವ ಘಟನೆ ಪ್ರಮುಖವಾದುದು. ಇಲ್ಲಿ ಉಳಿಗಮಾನ್ಯ ಪದ್ದತಿಯ ವಿರುದ್ದ ಪ್ರತಿಭಟಿಸುವ, ಅವರೊಂದಿಗೆ ಘರ್ಷಣೆಗೆ ಇಳಿಯುವ ದಲಿತ ಪಾತ್ರಗಳನ್ನು ಕುವೆಂಪು ಚಿತ್ರಿಸಿದ್ದಾರೆ. ಕಾದಂಬರಿಯ ಅಂತ್ಯದಲ್ಲಿ ಗುತ್ತಿಗೆ ಏನೆ ಕಷ್ಟಗಳು ಬಂದರೂ ಆತ ತಿಮ್ಮಿಯನ್ನು ವಿವಾಹವಾಗಿ ಉಳಿಗಮಾನ್ಯ ಪದ್ದತಿಯ ವಿರುದ್ದ ಜಯಗಳಿಸುವುದನ್ನು ನೋಡಬಹುದು. ಈ ಪ್ರಯತ್ನಕ್ಕೆ ಕುವೆಂಪುರವರು ಓಡು ಹುಳುವಿನ ಪ್ರತಿಮೆಯ ಮೂಲಕ ಗುತ್ತಿಗೆ ಮಾನಸಿಕ ಧೈರ್ಯ ತುಂಬುವ ಪ್ರಯತ್ನ ಮಾಡುವುದು ಗಮನಾರ್ಹವಾಗಿದೆ. ".......... ಅತ್ಯಮೂಲ್ಯವಾದ ಪದಾರ್ಥವನ್ನು ಅತಿ ಪ್ರಯಾಸದಿಂದ ಸಾಗಿಸುವ ಸಾಹಸದಲ್ಲಿ ತೊಡಗಿದಂತಿತ್ತೂ ಅದರ ದೃಢ ಪ್ರಯತ್ನ. ಆ ಉಂಡೆ ಒಂದು

ಸಣ್ಣ ದಿಬ್ಬವನ್ನು ಹತ್ತಿ ಅದರ ನೆತ್ತಿಗೆ ಬಂದೊಡನೆ ಮತ್ತೆ ಕೆಲಕ್ಕುರುಳಿತು. ಓಡುಹುಳು ಮತ್ತೆ ಅದನ್ನು ಬಳಿಸಾರಿ ತನ್ನ ಹಿಂಗಾಲುಗಳಿಂದ ತಬ್ಬಿ ಹಿಡಿದು ದಬ್ಬತೊಡಗಿತು. ಹೀಗೆ ಒಂದೆರಡು ಗೇಣು ಹೋಗುವುದರೊಳಗಾಗಿ ನಾನಾ ಆಡಚಣೆಗಳಿಗೆ ಒಳಗಾದರೂ ಧೃತಿಗೆಡದೆ ನಿರಾಶವಾಗದೆ ಕಿನಿಸಿಕೊಳ್ಳದೆ ಪ್ರಶಾಂತವಾಗಿಯೇ ತನ್ನ ಕೆಲಸವನ್ನು ಸಾಗಿಸುತ್ತಿತ್ತು. "[೧೧] ಈ ಘಟನೆ ಗುತ್ತಿಯ ಮನಸ್ಥಿತಿಗೆ ಹತ್ತಿರವಾಗಿದೆ. ಆತ ತಿಮ್ಮಿಯನ್ನು ಅಪಹರಿಸಿ ಕರೆದುಕೊಂಡುಹೋಗಬೇಕಿದೆ. ಅವನಿಗೆ ಈ ಕಾರ್ಯದಲ್ಲಿ ಹಲವಾರು ವಿಪತ್ತುಗಳು ಎದುರಾಗುತ್ತವೆ. ಅವಿಪತ್ತುಗಳನ್ನು ಓಡುಹುಳವಿನ ಸಂಯಮದಿಂದ ಎದುರಿಸಿ ಆತ ತನ್ನ ಕಾರ್ಯವನ್ನು ಯಶಸ್ವಿಗೊಳಿಸಿಕೊಳ್ಳಬೇಕು ಎಂಬ ಎಚ್ಚರವನ್ನು ಕುವೆಂಪುರವರು ಮೇಲಿನ ಘಟನೆಯ ಮೂಲಕ ಗುತ್ತಿಗೆ ಎಚ್ಚರಿಸುತ್ತಿದ್ದಾರೆಂದು ಊಹಿಸಬಹುದು.

ದಲಿತ ಪಾತ್ರಗಳಿಗೆ ಸ್ವಂತ ಅಸ್ತಿತ್ವದ ಕಲ್ಪನೆ ಇಲ್ಲ ಎಂಬ ಆರೋಪವನ್ನು ಮೇಲಿನ ವಿಮರ್ಶಕರು ಮಾಡಿದ್ದಾರೆ. ಶೂದ್ರ ಪಾತ್ರಗಳಿಗಿರುವಂತೆ ದಲಿತ ಪಾತ್ರಗಳಿಗೆ ಸತ್ವ ಇಲ್ಲ ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯವನ್ನು ಸೇಸಿ ಪಾತ್ರದ ಪ್ರತಿಭಟನೆಯ ಸಂದರ್ಭದಲ್ಲಿ ಕುವೆಂಪುರವರು ಹುಸಿಗೊಳಿಸಿದ್ದಾರೆ. ಹಾಗೆಯೇ ಮುಕುಂದಯ್ಯ ಗುತ್ತಿಯ ಹುಲಿಯನನ್ನು ತನಗೆ ನೀಡಬೇಕು ಎಂದು ಬೇಡಿಕೊಂಡ ಸಂದರ್ಭದಲ್ಲಿ ಗುತ್ತಿ ತೋರಿದ ಔದಾರ್ಯ ಮೇಲಿನ ಹೇಳಿಕೆಯನ್ನು ಹುಸಿಗೊಳಿಸುತ್ತವೆ.

ಕಲ್ಲಯ್ಯಗೌಡರು ಸಣ್ಣ ಬೀರನನ್ನು ದಂಡಿಸುತ್ತಿರುವ ವಿಚಾರವನ್ನು ತಿಳಿದ ಸೇಸಿ ತನ್ನ ಬಿಡಾರದಿಂದ ಓಡೋಡಿ ಬಂದು ಮರೆಯಲ್ಲಿ ನಿಂತಿದ್ದಳು. ತನ್ನ ಮಗ ಪ್ರಜ್ಞೆ ತಪ್ಪಿ ತಲೆ ಕತ್ತಿನ ಮೇಲೆ ನಿಲ್ಲಲೊಲ್ಲದೆ ಜೋತುಬಿದ್ದ ತಕ್ಷಣ ಆಕೆ ಎದೆ ಎದೆ ಬಡಿದುಕೊಳ್ಳುತ್ತಾ ಬಂದು ಇಜಾರದ ಸಾಬಿಯ ಕೈಲಿದ್ದ ಹುಣಸೆಯ ಬರಲನ್ನು ಕಿತ್ತೆಸೆದು ಅವನನ್ನು ತಳ್ಳಿ ಜೋಲುತ್ತಿದ್ದ ಮಗನನನು ಆಪ್ಪಿಕೊಳ್ಳುತ್ತಾಳೆ. ಈ ಸಂದರ್ಭದ ಸೇಸಿಯ ತಾಯ್ತಿನದ ಸಂಕಟವನ್ನು ಆಕೆ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವುದನ್ನು ಕುವೆಂಪುರವರು ಚಿತ್ರಿಸಿದ್ದಾರೆ.

"ದಾಂಡಿಗನೂ ಬಲಿಷ್ಠನೂ ಕ್ರೂರಿಯಾ ಆಗಿ, ಇಂತಹ ಧೂರ್ತ ಕರ್ಮಗಳಲ್ಲಿ ನುರಿತು ನಿಷ್ಠುರನಾಗಿದ್ದ ಇಜಾರದ ಸಾಬುಗೆ ಅದೇನಾಯಿತೋ ಏನೊ? ಇದ್ದಕ್ಕಿದ್ದಂತೆ ಸತ್ವಹೀನನಾದವನಂತೆ ನಿರ್ಬಲನಾಗಿ, ಸೇಸಿ ದುಃಖಾರ್ತೆಯಾಗಿ ಓಡಿಬಂದು ಎಳೆದೊಡನೆ ಅವನ ಕೈಲಿದ್ದ ಹುಣಸೆ ಬರಲು ತನಗೆ ತಾನೆ ಎಂಬಂತೆ ಕೈಬಿಟ್ಟು ಹೊಗಿತ್ತು! ಅವಳು ತಳ್ಳಿದೊಡನೆ ಒಂದಲ್ಲ, ಎರಡು ಮೂರು, ಹಿಂಜರಿದು ಸ್ತಂಭೀಭೂತನಾದಂತೆ ನಿಂತುಬಿಟ್ಟನು. ಹೊಲೆಯಳಾದರೂ, ಬಡವಳಾದರೂ, ಯಾವ ವಿಧವಾದ ವ್ಯಕ್ತಿತ್ವ ವಿಶೇಷವೂ ಲವಲೇಶವೂ ಇಲ್ಲದವಳಾದರೂ ಸಂಕಟ ತಪ್ತ ತಾಯ್ತಿನ ಎಂತಹ ಅಲ್ಪ ಸ್ತ್ರೀಯನ್ನಾದರೂ ಭೂಮಪಟ್ಟಕ್ಕೇರಿಸಿ ಬಿಡುತ್ತದೆಯೋ ಏನೋ ಎಂಬಂತೆ, ಅವಳ ಮಾತೃ ದುಃಖ ಜನ್ಯಕ್ರೋಧದ ಸಾನ್ನಿಧ್ಯಭೀಷಣೆಗೆ ಕ್ಷಣಮಾತ್ರ ಭೀತಚೇತಸನಾದನು ಇಜಾರದಸಾಬಿ! ಗೌಡರ ಆಜ್ಞೆಯನ್ನು ಮರೆತು, ಸೇಸಿಯ ಮಾತಿಲ್ಲದ ಆಣತಿಗೆ ಒಳಗಾದವನಂತೆ, ಬೇಗಬೇಗನೆ ಸಣ್ಣ ಬೀರನನ್ನು ಬಿಗಿದಿದ್ದ ಹಗ್ಗದ ಕಟ್ಟುಗಳನ್ನೆಲ್ಲಾ ಬಿಚ್ಚಿಹಾಕಿದುನು"[೧೨] ಇಲ್ಲಿ ಸೇಸಿಯ ಪ್ರತಿಭಟನೆಯ ಸ್ವರೂಪವನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಬೇರೆ ಸಂದರ್ಭಗಳಲ್ಲಿ ಗೌಡರನ್ನು ಕಂಡರೆ ನೂರುಮೂರು ದೂರದಲ್ಲಿಯೆ ಹೆದರಿ ಕುಗ್ಗಿ ಹುದುಗಿಕೊಳ್ಳುವ ದಲಿತ ಪಾತ್ರಗಳು ಇಂತಹ ಸಂದಿಗ್ದ ಪರಿಸ್ಥಿತಿಗಳಲ್ಲಿ ಮೈ ಮೇಲೆ ಜಕಣಿ ಬಂದಿತೋ ಎಂಬ ರೀತಿಯಲ್ಲಿ ವ್ಯವಸ್ಥೆಯ ವಿರುದ್ಧ ಸಿದಿದೇಳುವುದನ್ನು ಕುವೆಂಪುರವರ ಕಾದಂಬರಿಗಳಲ್ಲಿ ಕಾಣಬಹುದು. ಇಲ್ಲಿ ದಾಖಲಾಗಿರುವ ಪ್ರತಿ ಪದವೂ ಮಾತೃ ಹೃದಯವನ್ನು ಧ್ವನಿಸುತ್ತದೆ. ಸೇಸಿಯ ಕ್ರೋಧಕ್ಕೆ ಇಡೀ ವಾತಾವರಣವೇ ತಲ್ಲಣಿಸುತ್ತದೆ.

ಹುಲಿಯ ಒಮ್ಮೆ ಒಂದು ಒಂಟಿಗ ಹಂದಿಯನ್ನು ಕಾಡಿನಲ್ಲಿ ತಡೆದು ನಿಲ್ಲಿಸಿತ್ತು. ಈ ಸಂದರ್ಭದಲ್ಲಿ ಮುಕುಂದಯ್ಯ ಅದಕ್ಕೆ ಗುಂಡು ಹೊಡೆದರು ಅದು ಮುನುಗ್ಗಿ ಕಾಡಿಗೆ ತಪ್ಪಿಸಿಕೊಂಡು ಹೋಗುತ್ತಿದ್ದಾಗ ಹುಲಿಯ ಅದರ ಮೇಲೆ ಬಿದ್ದು ಕೋರೆಯಿಂದ ತಿವಿಸಿಕೊಂಡು ಹಲವು ದಿನಗಳವರಗೆ ಸಿಂಬಾವಿಗೆ ಹೋಗದೆ ಕೋಣೂರಿನಲ್ಲಿ ಮುಕುಂದಯ್ಯನ ಶುಶ್ರೂಷೆ ಪಡೆಯುತ್ತಿತ್ತು. ಹುಲಿಯನ ಶಕ್ತಿ, ಯುಕ್ತಿ, ಧೈರ್ಯ, ವೇಗ ಇವುಗಳನ್ನು ಗಮನಿಸಿದ್ದ ಮುಕುಂದಯ್ಯ ಇದರ ಮೇಲೆ ಭಾರಿ ಮಮತೆ ಹೊಂದಿದ್ದನು. ಗುತ್ತಿ ಹುಲಿಯನನ್ನು ಸಿಂಬಾವಿಗೆ ಕರೆದುಕೊಂಡು ಹೋಗಲು ಬಂದ ಸಂದರ್ಭದಲ್ಲಿ ಮುಕುಂದಯ್ಯ ಹುಲಿಯನನ್ನು ತನ್ನಲ್ಲೆ ಬಿಟ್ಟು ಬಿಡಬೇಕೆಂದು ಪರಿಪರಿಯಾಗಿ ಗುತ್ತಿಯನ್ನು ಪೀಡಿಸಿದನು. ಹೊಲೆಯನ ಮುಂದೆ ಒಂದು ಕರಿಯನಾಯಿಗಾಗಿ ಅಂಗಲಾಚುವುದನ್ನು ಸಹಿಸದ ಗುತ್ತಿ ಮುಕುಂದಯ್ಯನಿಗೆ ಕೊಟ್ಟು ತಾನು ಅನುಭವಿಸುವ ಹಿಂಸೆಯನ್ನು ಕುವೆಂಪುರವರು ಹೀಗೆ ವಿವರಿಸಿದ್ದಾರೆ.

"ಗುತ್ತಿ ಕಣ್ಣೀರು ತುಂಬಿ ಗದ್ಗದ ಸ್ವರದಿಂದ ಒಪ್ಪಿಕೊಳ್ಳಬೇಕಾಯಿತು. ಅದು ನಾಯಿಗೆ ಹೇಗೆ ಗೊತ್ತಾಗಬೇಕು ? ಕಂಬಕ್ಕೆ ಕಟ್ಟಿದ್ದ ಹುಲಿಯನನ್ನು ತಲೆ ಸವರಿ ಮುದ್ದಾಡಿ ಗುತ್ತಿ ಸಿಂಬಾವಿಯ ಕಡೆ ಹೊರಟನು, ಮುಕುಂದಯ್ಯ ಅವನು ಬೇಡವೆಂದರೂ ಕೊಟ್ಟಿದ್ದ ಒಂದು ಹೊಸ ಹೆಗ್ಗಂಬಳಿ, ಒಂದು ಹಳೆಯದಾದಗೂ ಚೆನ್ನಾಗಿದ್ದ ಕಸೆ ಅಂಗಿ, ಒಂದಷ್ಟು ಎಲೆ ಅಡಿಕೆ, ಹೊಗೆಸೊಪ್ಪು, ಒಂದು ರೂಪಾಯಿ ಇವುಗಳನ್ನು ಹೊತ್ತು.

'ಒಂದು ಮೈಲಿ ಹೋಗುವುದರೊಳಗೆ ಗುತ್ತಿಗೆ ಮುಂದಕ್ಕೆ ಅಡಿಯಿಡಲಾಗಲಿಲ್ಲ. ಏನೋ ಸುಸ್ತು! ಏನೋ ಸಂಕಟ! ಯಾರನ್ನೋ ಅತ್ಯಂತ ಪ್ರಿಯತಮರನ್ನು ಅಗಲಿದಂತೆ ಎದೆ ಬೇಗೆ! ಹಾದಿಯ ಪಕ್ಕದಲ್ಲಿ ಉಸ್ಸೆಂದು ಕುಳಿತು, ಕಾಡಿನ ನಡುವೆ ಯಾರು ನೋಡುವುದಿಲ್ಲವೆಂದು ಧೈರ್ಯ ಮಾಡಿಕೊಂಡು, ಬಿಕ್ಕಿ ಬಿಕ್ಕಿ ಅತ್ತು ಬಿಟ್ಟನು.

....ಗುತ್ತಿ! ಮತ್ತೆ ಹಿಂತಿರುಗಿ ಬಂದಿದ್ದಾನೆ! ಯಾಕೆ?'ಎಂದು ಕೇಳಿದರೆ ಮಾತಾಡದೆ ಉತ್ತರ ರೂಪವಾಗಿ, ಮುಕುಂದಯ್ಯ ಕೊಟ್ಟಿದ್ದ ಸಾಮಾನುಗಳನ್ನೆಲ್ಲ, ರೂಪಾಯಿಯೂ ಸೇರಿ ಹುಲಿಯನ ಮುಂದೆ ಇಟ್ಟು ಕೈಮುಗಿದು ನಿಂತುಬಿಟ್ಟನು. ರಂಗಪ್ಪ ಗೌಡರಾದಿಯಾಗಿ ಐಗಳು ಮನೆಯವರು ಎಲ್ಲರೂ ಮನಕರಗಿ ನಾಯಿಯನ್ನು ಗುತ್ತಿಗೆ ಕೊಟ್ಟು ಬಿಡುವಂತೆ ಮುಕುಂದಯ್ಯನಿಗೆ ಹೇಳಿದರು. ಆದರೆ ಮುಕುಂದಯ್ಯನಿಗೆ ಮನಸ್ಸಿಲ್ಲ. ಅವನ ಕಣ್ಣು ತೇವವಾಗ ತೊಡಗಿತ್ತು ಅದನ್ನು ಗಮನಿಸಿದ ಗುತ್ತಿ ಒಡೆಯರ ದೈನ್ಯಕ್ಕೆ ಮನಸೋತು.'ನನಗೆ ನಾಯಿಯ್ನು ಕೊಡದಿದ್ದರೂ ಚಿಂತೆಯಿಲ್ಲ, ಅದನ್ನು ಮಾರಬಿಟ್ಟೇ ಎಂದು ನನ್ನ ಮನಸ್ಸಿಗೆ ಇಸ್ಸಿ ಆಗಬಾರದು ; ಆದ್ದರಿಂದ ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ ; ಈ ಸಾಮಾನನ್ನಲ್ಲ ಹಿಂದಕ್ಕೆ ತೆಗೆದುಕೊಳ್ಳಿ !' ಎಂದು ತಟಕ್ಕನೆ ಹಿಂದಿರುಗಿ ಅಲ್ಲಿ ನಿಲ್ಲದೆ ಹುಲಿಯನ ಊಳನ್ನು ಗೋಳನ್ನು ಇನಿತೂ ಗಮನಿಸಿದವನಂತೆ ನಡದೇ ಬಿಟ್ಟನು."[೧೩] ಮೇಲಿನ ಉದಾರಣೆಗಳನ್ನು ನೋಡಿದರೆ ದಲಿತ ಪಾತ್ರಗಳಿಗೆ ಸತ್ವ ಇಲ್ಲ ಎಂಬ ಮಾತನ್ನು ನಂಬುವುದಕ್ಕೆ ಸಾಧ್ಯವಿಲ್ಲ. ದಲಿತನಾದರೂ ಆತನಲ್ಲಿ ಅಭಿವ್ಯಕ್ತವಾಗುವ ಪ್ರಾಣಿ ಪ್ರೀತಿ, ಸತ್ಯಸಂಧತೆ, ಪ್ರಾಮಾಣಿಕತೆ ಇವು ಗುತ್ತಿಯ ಹಿರಿಮೆಯನ್ನು ಹೆಚ್ಚಿಸಿವೆ. ಕುವೆಂಪುರವರು ಸೃಜಿಸಿರುವ ಇಂತಹ ಪಾತ್ರಗಳು ದಲಿತ ಸಮುದಾಯಕ್ಕೆ ಗೌರವ ಸೂಚಕ ಪ್ರತಿಮೆಗಳಾಗಿವೆ.

ಕುವೆಂಪು ಕಾದಂಬರಿಯಲ್ಲಿ ಚಿತ್ರಿತವಾಗಿರುವ ಕೆಲವು ದಲಿತ ಪಾತ್ರಗಳು ಸೇಡಿನ ಕಿಡಿಯನ್ನು, ಪ್ರತೀಕಾರದ ಅಗ್ನಿಯನ್ನು ತಮ್ಮ ಒಡಲೊಳಗೆ ಹುದುಗಿಸಿಟ್ಟಿಕೊಂಡಿರುವ ಘಟನೆಗಳನ್ನು ಕುವೆಂಪುರವರು ಚಿತ್ರಿಸಿದ್ದಾರೆ. ಸಣ್ಣ ಬೀರ ಇಜಾರದಸಾಬುವಿನಿಂದ ಶಿಕ್ಷೆ ಅನುಭವಿಸಿದ ನಂತರ ಆತನ ವಿರುದ್ದ ಸೇಡು ತೀರಿಸಿಕೊಳ್ಳಲು ಕಾಯುತ್ತಿದ್ದಾನೆ. ಇಜಾರದಸಾಬಿಯ ಮೇಲಿ ಆತನ ಸಿಟ್ಟು ಹೀಗೆ ವ್ಯಕ್ತವಾಗಿದೆ. "..........ಆ ಮಾಕೀಮನೆ ಈರಣ್ಣನ್ನ ಕಡ್ದು ರಕ್ತ ಕುಡಿದ್ರಂತಲ್ಲಾ ಹಾಂಗೇ

ಅವನ ರಕ್ತ ಕುಡೀದೆ ಇದ್ರೆ ನಾನು ಅಪ್ಪಗೆ ಹುಟ್ಟಿದಾಂವ ಅಲ್ಲಾ! ನೋಡ್ತಿರು ! ನನ್ನ ಬೆನ್ನಿನ ಬಾಸುಂಡೆ ಇನ್ನೂ ಮಾದಿಲ್ಲ.....ಏನೋ ನಮ್ಮ ಧಣಿ ಉಪ್ಪು ಅನ್ನ ಹಾಕಿ ಸಾಕ್ಕೋರು ಇದ್ರಲ್ಲಾ ಅಂತಾ ಅವೋತ್ತು ಸುಮ್ಮನಿದ್ದೆ ! ಇನ್ನೊಂದು ಸಲ ನನಗೆ ಸಿಕ್ಲಿ ಸಮಯ ? ನೋಡ್ತೀನಿ ನನ್ನ ಕೈಲಿ ಏನಾಗ್ತದೆ ಅಂತಾ? ಬಗನೇ ಕತ್ತೀನ ಮಸೆದು ಇಟ್ಟುಕೊಂಡ್ಹಾಂಗೆ ಇಟ್ಟುಕೊಂಡೀನಿ. ನನ್ನ ಕೆಲಸದ ಕತ್ತೀನ ! ಉಂದೇ ಕೊಚ್ಚಿಗೆ ಅವನ ಆನೆ ಗ್ರಾತ್ರದ ಕುತ್ತಿಗೆ ಕತ್ತರಿಸಿ ಬೀಳಬೇಕು. ಹಾಂಗೆ ಹೊಡೀತೇನಿ."[೧೪] ಎಂಬ ಪ್ರತಿಜ್ಞೆಯನ್ನು ಸಣ್ಣ ಬೀರ ಇಜಾರದ ಸಾಬಿಯ ವಿರುದ್ಧ ಮಾಡುತ್ತಾನೆ. ಅವನಿಗೆ ಶಿಕ್ಷೆ ವಿಧಿಸಿದ ಕಲ್ಲಯ್ಯ ಗೌಡರ ಮೇಲೆ ಆತನಿಗೆ ದ್ವೇಷವಿಲ್ಲ. ಬದಲಿಗೆ ಶಿಕ್ಷೆ ನೀಡಿದ ಇಜಾರದ ಸಾಬಿಯ ಮೇಲೆ ಅವನಿಗೆ ಕೊಪವಿದೆ. ಇಂತಹ ಪ್ರತೀಕಾರದ ಫಲವಾಗಿ ಇಜಾರದಸಾಬಿಯ ಬಲಗೈ ಹೆಬ್ಬೆರಳನ್ನು ಸಣ್ಣಬೀರ ತುಂಡರಿಸುತ್ತಾನೆ. ಪರಿಣಾಮವಾಗಿ ಗುತ್ತಿ ಪೋಲಿಸಿನವರ ಭಯದಿಂದ ಆತ ಊರನ್ನು ಬಿಡಬೇಕಾಗಿ ಬರುತ್ತದೆ. ತನ್ನ ಜೀವದ ಅಂಗವಾಗಿದ್ದ ಹುಲಿಯನನ್ನು ಪ್ರವಾಹದಲ್ಲಿ ಕಳೆದುಕೊಳ್ಳಬೇಕಾದ ಅನಿವಾರ್ಯತೆ ಗುತ್ತಿಗೆ ಎದುರಾಗುತ್ತದೆ. ಉಳಿಗಮಾನ್ಯ ವ್ಯವಸ್ಥೆಯ ಅಡಿಕತ್ತರಿಯಲ್ಲಿ ಸಿಕ್ಕಿದ ದಲಿತನೊಬ್ಬನ ಬದುಕು ಹೇಗೆ ದುರಂತದ ಕಡೆಗೆ ಸಾಗುತ್ತದೆ. ಎಂಬುದು ಗುತ್ತಿಯ ಪಾತ್ರದ ಮೂಲಕ ಕುವೆಂಪುರವರು ಉಳಿದ ದಲಿತ ಸಮುದಾಯಕ್ಕೆ ತಿಳಿಸಿದ್ದಾರೆ.

ಮೇಲಿನ ಎಲ್ಲಾ ಘಟನೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕುವೆಂಪು ವಾಸ್ತವ ಬದುಕಿನ ಚಿತ್ರಣವನ್ನು ತಮ್ಮ ಕಾದಂಬರಿಯಲ್ಲಿ ದಾಖಲಿಸಿದ್ದಾರೆ ಎಂಬುದು ಮನದಟ್ಟಾಗುತ್ತದೆ. ಈ ಹಿಂದೆ ದಲಿತರನ್ನು ಕುರಿತು ಬರೆದ ಎಷ್ಟೋ ಲೇಖಕರ ಬರವಣಿಗೆಗಳಿಗಿಂತ ಕುವೆಂಪುರವರ ಬರವಣಿಗೆ ದಲಿತ ಬದುಕಿನ ಹಲವಾರು ಒಳನೋಟಗಳನ್ನು ಓದುಗುರಿಗೆ ಪರಿಚಯಿಸುತ್ತದೆ. ಇಲ್ಲಿ ದಾಖಲಾಗಿರುವ ಹಲವು ದಲಿತ ಪಾತ್ರಗಳು ಸ್ವಂತ ಅಸ್ತಿತ್ವವನ್ನು ಹೊಂದಿದ ಪಾತ್ರಗಳಾಗಿವೆ. ಸಮಾಜದಲ್ಲಿ ಮೇಳು-ಕೀಳು ಎಂಬ ಅಂತರಗಳ ನಡುವೆಯು ಒಂದು ಜನಾಂಗ ಮತ್ತೊಂದು ಜನಾಂಗದೊಂದಿಗೆ ಸಹಕರಿಸುತ್ತಾ ಪರಸ್ಪರ ಒಂದನೊಂದು ಅವಲಂಬಿಸಿಕೊಂಡು ಬದುಕುವ ಮಲೆನಾಡಿನ ಸಂಪ್ರದಾಯಿಕ ಜೀವನ ಪದ್ದತಿಯನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕೆಳವರ್ಗದ ಅಸ್ಪಶ್ಯ ಸಮುದಾಯದ ಜನರ ಮನುಷ್ಯ ಸಹಜ ಪ್ರೀತಿ ಕರುಣೆ, ತ್ಯಾಗ, ಪ್ರತಿಭಟನೆ ಮುಂತಾದ ಗುಣಗಳನ್ನು ಅವಿದ್ಯಾವಂತ ಪಾತ್ರಗಳು ಹೊಂದಿರುವುದನ್ನು ದಾಖಲಿಸಿದ್ದಾರೆ.

'ಸೇಸಿಯ' ಪಾತ್ರದ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಹಾಗೂ ಉಳಿಗಮಾನ್ಯ ವ್ಯವಸ್ಥೆಯ ಕ್ರೂರತನಗಳನ್ನು ಖಂಡಿಸಿದ್ದಾರೆ. ಸೇಸಿ, ಜೀತದಾಳು ಮೇಲಾಗಿ ದಲಿತ ಮಹಿಳೆ ಈಕೆ ಧಣಿಗಳ ನಿರ್ಧಾರವನ್ನು ಪ್ರಶ್ನಿಸುವ ಅವರ ಕ್ರೂರ ತನಗಳನ್ನು ಖಂಡಿಸುವ ಪ್ರಗತಿಪರ ಪಾತ್ರವಾಗಿ ಚಿತ್ರಿತಳಾಗಿದ್ದಾಳೆ. ಪ್ರೀತಿಸಿದ ಎರಡು ಜೀವಿಗಳನ್ನು ಒಂದು ಗೂಡಿಸುವ ಸಲುವಾಗಿ ವ್ಯವಸ್ಥೆಯನ್ನು ಎದುರು ಹಾಕಿಕೊಂಡು ಹೋರಾಡುವ ಅವಳ ಧೈರ್ಯ ಉಳಿದ ದಲಿತ ಸಮುದಾಯದ ಮಹಿಳೆಯರಿಗೆ ಆದರ್ಶಪ್ರಾಯವಾಗಿದೆ. ಪುರುಷರಿಗೂ ಅಸಾಧ್ಯವಾದ ಸಂದರ್ಭದಲ್ಲಿ ಆಕೆ ತನ್ನ ಧೈರ್ಯ, ಸಾಹಸದ ಗುಣಗಳಿಂದ ಪರಿಸ್ಥಿತಿಯನ್ನು ನಿಯಂತ್ರಿಸುವುದು ಸುಲಭದ ಮಾತಲ್ಲ. ಈಕೆ ಧಣಿಯನ್ನು ಬೇಡಿಕೊಳ್ಳವುದನ್ನು ಆಕೆಯ ಅಸಹಾಯಕತೆ ಎಂದು ಬಿಂಬಿಸುವ ಬದಲು ಇಡಿ ಪ್ರಸಂಗವೇ ಜೀತದಾಳೊಬ್ಬನ ಮೇಲೆ ಆಳುವ ವರ್ಗ ನಡೆಸುವ ಹಲ್ಲೆಗೆ, ಪ್ರತಿಭಟನೆ ಎಂಬಂತೆ ಕಾದಂಬರಿಯಲ್ಲಿ ಚಿತ್ರಣಗೊಂಡಿರುವುದನ್ನು ಗಮನಿಸಬಹುದು.

ಗುತ್ತಿಯ ಭಾವನಾತ್ಮಕ ಗುಣವನ್ನು ಕುವೆಂಪುರವರು ಮುಕುಂದಯ್ಯ ಹುಲಿಯನ ಬದಲಿಗೆ ನೀಡಿದ್ದ ವಸ್ತುಗಳನ್ನು ಹಿಂತಿರುಗಿನುವಾಗಿನ ಸಂದರ್ಭ ತಿಳಿಸುತ್ತದೆ. ಕುವೆಂಪು ಕಾದಂಬರಿಗಳಲ್ಲಿನ ಸಾಮಾಜಿಕ ಬದುಕಿನ ಚಿತ್ರಣಗಳಲ್ಲಿ

ದಲಿತ ಪಾತ್ರಗಳನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವಿಲ್ಲ. ಸುಬ್ಬಣ್ಣ ಹೆಗ್ಗಡೆ ಹಂದಿಯ ಹೇಲುಗೆಸರನ್ನು ಮಟ್ಟುತ್ತಾ ಅಸ್ಪೃಶ್ಯರಿಂದ ದೂರ ಸರಿದು ನಿಲ್ಲುತ್ತಾರೆ. ಆದರೆ ಒಮ್ಮೆ ಅವರು ಕಾಡು ದಾರಿಯಲಿ ನಡೆದು ಆಯಾಸವಾಗಿ ಬಿದ್ದಾಗ ಅವರನ್ನು ಸಂತೈಸಲು, ಅವರನ್ನು ರಕ್ಷಿಸಲು ಅವರ ಸಹಾಯಕ್ಕೆ ದಲಿತರೇ ಬರಬೇಕಾಗುತ್ತದೆ. ದಲಿತರ ತಿಮ್ಮಿ ಮತ್ತು ಗುತ್ತಿಯರು ಕಷ್ಟದಲ್ಲಿ ಇದ್ದ ಸಂದರ್ಭದಲ್ಲಿ ಘಟ್ಟದ ಕೆಳಗಿನ ಐತ ಪಿಂಚಲು ಇವರಿಗೆ ಸಹಾಯ ಮಾಡುವುದನ್ನು ನೋಡಬಹುದು. ಮೇಲಿನ ಎಲ್ಲಾ ಘಟನೆಗಳ ಹಿಂದೆ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ ಜಾತಿ ವ್ಯವಸ್ಥೆ ಸಮಾಜದ ಜನರನ್ನು ವಿಂಗಡಿಸಿದ್ದರು, ವಾಸ್ತವ ಬದುಕಿನಲ್ಲಿ ಎಲ್ಲಾ ಸಮುದಾಯದ ಜನರು ಒಬ್ಬರನೊಬ್ಬರು ಅವಲಂಬಿಸಿಕೊಂಡು ಸಾಂಘಿಕ ಬದುಕನ್ನು ಬದುಕುತ್ತಿರುವ ಸಮಗ್ರ ಚಿತ್ರಣವನ್ನು ತಮ್ಮ ಕಾದಂಬರಿಗಳಲ್ಲಿ ಕುವೆಂಪು ದಾಖಲಿಸಿದ್ದಾರೆ.

ಕುವೆಂಪು ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ದಲಿತಲೋಕ ವಿಭಿನ್ನಬಗೆಯದು ಕುವೆಂಪುರವರು ಏಕಕಾಲದಲ್ಲಿ ದಲಿತ ಸಮಸ್ಯೆ ಮತ್ತು ದಲಿತರ ಬದುಕು ಎರಡನ್ನು ಸೂಕ್ಷ್ಮವಾಗಿ ಅವಲೋಕಿಸಿ ಅವರ ಸಮಗ್ರ ಚಿತ್ರಣವನ್ನು ನೀಡಿದ ಮೊದಲಿಗರು. ಇವರಂತೆ ದಲಿತ ಬದುಕನ್ನು ಕುರಿತು ಬರೆದ ಇತರ ಲೇಖಕರ ಬರಹಗಳು ಕುವೆಂಪು ಅವರಷ್ಟು ಸೂಕ್ಷ್ಮ ಒಳನೋಟಗಳನ್ನು ಒಳಗೊಂಡಿಲ್ಲದಿರುವುದನ್ನು ನೋಡಬಹುದು. ಎಷ್ಟೋ ದಲಿತರನ್ನು ಕುರಿತಾದ ಬರಹಗಳು ದಲಿತ ಹೆಣ್ಣು ಮಕ್ಕಳು ಮೇಲ್ಜಾತಿಯ ಗಂಡಸರಿಗೆ ತಮ್ಮನ್ನು ಮಾರಿಕೊಳ್ಳುವಂತಹ, ಅಂತರಜಾತಿಯ ವಿವಾಹಗಳನ್ನು ವಿಫಲಗೊಳಿಸುವಂತಹ, ರೂಢಿ ಸಂಪ್ರದಾಯಗಳನ್ನು ಬಿಟ್ಟರೆ ತಾವು ಅನಾಥರಾಗುತ್ತೇವೆ. ಇಂಬಂತಹ ಪ್ರತಿಗಾಮೀ ಧೋರಣೆಗಳನ್ನು ಹೊಂದಿರುವಂತಹ ಬರಹಗಳನ್ನು ದಲಿತ ಲೇಖಕರು ದಾಖಲಿಸಿದ್ದಾರೆ. ಆದರೆ ಕುವೆಂಪು ಅವರು ಸಮಾಜದ ಅತ್ಯಂತ ಕೆಳಸ್ತರದಲ್ಲಿರುವ ದಲಿತರ ಸಾಮಾಜಿಕ ಪರಿಸ್ಥಿತಿ ಎಂತಹದ್ದು. ಅವರು ಮೇಲ್ವರ್ಗದವರಿಂದ ಅನುಭವಿಸುತ್ತಿರುವ ಯಾತನೆಯ ಸ್ವರೂಪ ಏನು? ಎಂಬ ಗಂಭೀರ ವಿಷಯಗಳ ಬಗ್ಗೆ ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ.

ಒಟ್ಟಿನಲ್ಲಿ ಕುವೆಂಪು ಕಾದಂಬರಿಗಳಲ್ಲಿ ದಲಿತ ಪಾತ್ರಗಳು ಹಲವಾರು ಸಂದಿಗ್ಧ ಪರಿಸ್ಥಿತಿಗಳ ನಡುವೆಯೂ ಕೆಲವೊಂದು ದಲಿತ ಪಾತ್ರಗಳು ಸ್ವಾಭಿಮಾನ, ಜೀವನ ಪ್ರೀತಿ, ಸಾಹಸ, ಜಾಣ್ಮೆ ಇವುಗಳನ್ನು ಹೊಂದಿರುವ ಅಂಶಗಳನ್ನು ಕಾಣಬಹುದು. ಅಲ್ಲದೇ ಬೇಟೆ, ಬಲಿಪದ್ದತಿ, ಮುಂತಾದ ಸಾಂಸ್ಕೃತಿಕ ಆಚರಣೆಗಳು ರೂಢಿ-ಸಂಪ್ರದಾಯಗಳು ಆಹಾರ ಪದ್ಧತಿಯ ವಿಧಾನಗಳು ಮುಂತಾದ ವಿಚಾರಗಳ ಬಗ್ಗೆ ನೈಜ ಚಿತ್ರಣವಿದೆ. ಕುವೆಂಪುರವರು ದಲಿತ ಬದುಕನ್ನು 'ಒಡೇರದಿಣ್ಣೆ' ಮೇಲೆ ನಿಂತು ನೋಡದೆ ಅವರನ್ನು, ಅವರ ಬದುಕನ್ನು ಅತೀ ಸಮೀಪದಿಂದ ಕಂಡಿದ್ದಾರೆ ಎಂಬುದಕ್ಕೆ ಅವರ ಎರಡು ಕಾದಂಬರಿಗಳಲ್ಲಿ ದಲಿತ ಜೀವನವನ್ನು ನೈಜವಾಗಿ ಚಿತ್ರಿಸಿರುವುದೇ ಸಾಕ್ಷಿಯಾಗಿದೆ.

**ಉಲ್ಲೇಖಗಳು :**

೧. ವಿ. ಎಂ. ಇನಾಂದರ್ : 'ಕುವೆಂಪು ಕಾದಂಬರಿಗಳು' (ಮಾರು ಉಪನ್ಯಾಸಗಳು, ಉಪಾ ಸಾಹಿತ್ಯ ಮಾಲೆ, ಮೈಸೂರು. ೧೯೭೯) ೮೩

೨. ಗಿರಡ್ಡಿಗೋವಿಂದ ರಾಜು : ಕಾದಂಬರಿಗಳಲ್ಲಿ ವೈಚಾರಿಕತೆ(ಮನ್ವಂತರ, ವಿಚಾರ ಸಂಕೀರಣ ವಿಶೇಷಾಂಕ) ೪೭.

೩. ಮೊಗಳ್ಳಿ ಗಣೇಶ್ (ಸಂ) : ದಲಿತ ಚಿಂತನೆ. ( ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೨) ೬೮.

೪. ಕುವೆಂಪು : ಮಲೆಗಳಲ್ಲಿ ಮದುಮಗಳು, (ಉದಯರವಿ ಪ್ರಕಾಶನ, ಮೈಸೂರು, ೧೯೯೨) ೩೪೭, ೪೮.

೫. ಕುವೆಂಪು : ಕಾನೂರು ಹೆಗ್ಗಡಿತಿ, (ಉದಯರವಿ ಪ್ರಕಾಶನ, ಮೈಸೂರು, ೨೦೦೪) ೮೪

೬. ಅದೇ : ೪೮೦

೭. ಕುವೆಂಪು : ಮಲೆಗಳಲ್ಲಿ ಮದುಮಗಳು, (ಉದಯರವಿ ಪ್ರಕಾಶನ, ಮೈಸೂರು,೧೯೯೨) ೩೫೪

೮. ಎಂ. ಜಿ. ಕೃಷ್ಣಮೂರ್ತಿ : ಕೃತಿ ಸಂಸ್ಕೃತಿ ( ಋಜುವಾತು ಪ್ರಕಾಶನ, ಮೈಸೂರು, ೧೯೯೪) ೧೩೯

೯. ಕುವೆಂಪು : ಮಲೆಗಳಲ್ಲಿ ಮದುಮಗಳು (ಉದಯರವಿ ಪ್ರಕಾಶನ, ಮೈಸೂರು, ೧೯೯೨)೫೭.

೧೦. ಅದೇ : ಪುಟ ೪೪೯

೧೧. ಅದೇ : ಪುಟ ೫೩.

೧೨. ಅದೇ : ಪುಟ ೩೪೯.

೧೩. ಅದೇ : ಪುಟ ೧೩೪– ೩೫.

೧೪. ಅದೇ : ಪುಟ ೩೭೩

* * *

# ೬ – ಸಮಾರೋಪ

ನವೋದಯ ಬರಹಗಾರರ ಮೇಲೆ ಗಾಂಧೀ ವಿಚಾರಧಾರೆಯ ಗಾಢ ಪ್ರಭಾವಾಗಿರುವುದನ್ನು ಗಮನಿಸಬಹುದು. ಈ ಸಂದರ್ಭದ ಬರಹಗಾರರು ದಲಿತ ಸಮಸ್ಯೆಗಳಿಗೆ ಪರಿಹಾರವನ್ನು ಗಾಂಧೀಜಿ ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿದರು. ಆ ಕಾಲದ ಅಸ್ಪೃಶ್ಯತೆಯನ್ನು ನಿವಾರಿಸುವುದು ಅಂದಿನ ಸಂದರ್ಭ ಬರಹಗಾರರ ಪ್ರಮುಖ ಆಶಯವಾಗಿತ್ತು. ಅಸ್ಪೃಶ್ಯತೆಯ ಆಚರಣೆಯ ಅಮಾನವೀಯ, ಅಮಾನುಷ ಮುಖಗಳನ್ನು ಅಂದಿನ ಸಂದರ್ಭದ ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು. ಈ ಸಾಮಾಜಿಕ ಧೋರಣೆಯನ್ನು ಬದಲಾವಣೆಗೆ ಗುರಿ ಪಡಿಸುವ ಅಗತ್ಯವನ್ನು ನವೋದಯದ ಸಂದರ್ಭದ ಲೇಖಕರು ಮುಂದಿಡುತ್ತಾರೆ.

ದಲಿತ ಸಾಹಿತಿಗಳು ಮತ್ತು ದಲಿತೇತರ ಸಾಹಿತಿಗಳು ಈ ಸಮಸ್ಯೆಯ ಪರಿಹಾರಕ್ಕಾಗಿ ಬೇರೆ ಬೇರೆ ಮಾರ್ಗಗಳನ್ನು ಅನುಸರಿಸುವುದನ್ನು ನೋಡಬಹುದು. ಸಹಪಂಕ್ತಿ ಭೋಜನ, ದೇವಾಲಯ ಪ್ರವೇಶ, ಅಂತರಜಾತಿಯ ವಿವಾಹ ಇಂತಹ ಸಮಸ್ಯೆಗಳ ವಿರುದ್ಧ ಸಮಾನತೆಯನ್ನು ಸಾಧಿಸುವ ನಿಟ್ಟಿನಲ್ಲಿ ಈ ಸಂದರ್ಭದ ಲೇಖಕರು ಕ್ರಾಂತಿಕಾರ ನಿಲುವುಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ದಾಖಲಿಸಿದ್ದಾರೆ.

ನವೋದಯದ ಸಂದರ್ಭದಲ್ಲಿ ದಲಿತ ಸಮಾಜ ಶಿಕ್ಷಣ ವ್ಯವಸ್ಥೆಯಿಂದ ವಂಚಿತವಾಗಿದೆ. ಈ ಕಾರಣಕ್ಕಾಗಿ ಅಂದಿನ ಲೇಖಕರು ಇಂಗ್ಲಿಷ್ ಶಿಕ್ಷಣ ಪದ್ಧತಿಯಲ್ಲಿನ ಸಾಧಕ–ಭಾದಕಗಳನ್ನು ತಮ್ಮ ಕೃತಿಗಳಲ್ಲಿ ಚರ್ಚಿಸಿದ್ದಾರೆ. ಹಾಗೆಯೇ ಅಂದಿನ ಮತಾಂತರ ಸಮಸ್ಯೆಯ ದುಷ್ಪರಿಣಾಮಗಳನ್ನು ಸಹ ತಮ್ಮ ಸಾಹಿತ್ಯ ಕೃತಿಗಳಲ್ಲಿ ದಾಖಲಿಸಿದ್ದಾರೆ. ಮತಾಂತರ ಪ್ರಕ್ರಿಯೆ ದಲಿತರಿಗೆ ವಿಮೋಚನೆ ನೀಡಲಾರದು. ಇದು ಶಾಶ್ವತ ಪರಿಹಾರವಲ್ಲ ಎಂಬ ದೃಢವಾದ ನಂಬಿಕೆಯನ್ನು ಈ ಸಂದರ್ಭದ ಲೇಖಕರು ವ್ಯಕ್ತಪಡಿಸುತ್ತಾರೆ. ದಲಿತ ಮಹಿಳೆಯರ ಲೈಂಗಿಕ ಶೋಷಣೆ ಉಳಿಗಮಾನ್ಯ ವ್ಯವಸ್ಥೆ ದಲಿತರನ್ನು ಶೋಷಿಸುವ ಪರಿ, ಗ್ರಾಮೀಣ ನ್ಯಾಯ ಪದ್ಧತಿಯಿಂದ ದಲಿತರು ಅನುಭವಿಸುವ ಹಿಂಸೆ, ಕ್ರೌರ್ಯ ಕುರಿತ ಮಾನವ ಸಹಜ ಸಹಾನುಭೂತಿಯನ್ನು ನವೋದಯದ ಸಂದರ್ಭದ ಲೇಖಕರು ವ್ಯಕ್ತಪಡಿಸುತ್ತಾರೆ. ನವೋದಯದ ಸಂದರ್ಭದ ದಲಿತ ಲೋಕ ಮೂಕವಾದದು, ನಿರ್ಭಾವಕವಾದದು ಸಂಸ್ಕೃತಿ ಹೀನವಾದದು, ಮೌಢ್ಯಗಳಿಂದ ಕುಡಿದುದು. ಈ ಹಲವು ಸಮಸ್ಯೆಗಳ ಪರಿಹಾರಕ್ಕಾಗಿ ಕುವೆಂಪು ಕಾದಂಬರಿಗಳ ಆದರ್ಶ ಯುವಕ ಪಾತ್ರಗಳು ದಲಿತರ ಉದ್ಧಾರಕ್ಕಾಗಿ ಜೀವನವನ್ನು ಮುಡಿಪಾಗಿರಿಸಿಕೊಂಡಿರುವ ಚಿತ್ರಣವನ್ನು ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ.

ನವೋದಯದ ಲೇಖಕರಿಗೆ ಅಸ್ಪೃಶ್ಯತೆ ಒಂದು ಸಹಜವಾದ ಆಚರಣೆಯಂತೆ ಕಂಡರೆ ದಲಿತ ಬರಹಗಾರರಿಗೆ ಈ ಸಮಸ್ಯೆ ಒಂದು ಪ್ರಮುಖವಾದ ಸಮಸ್ಯೆಯಾಗಿದೆ. ಈ ಸಮಸ್ಯೆಯ ಪರಿಹಾರಕ್ಕಾಗಿ ದಲಿತ ಸಾಹಿತಿಗಳು ತಮ್ಮ ಸೃಜನಶೀಲ ಬರವಣಿಗಳ ಮೂಲಕ ಪ್ರಯತ್ನಿಸಿದರು. ಸಮಾಜದಲ್ಲಿ ಸಮಾನತೆಯನ್ನು ನಿರ್ಮಿಸಲು ಪ್ರಗತಿಪರವಾಗಿ ಚಿಂತಿಸಿ ಜನರಲ್ಲಿ ಪ್ರಜ್ಞೆಯನ್ನು ಮೂಡಿಸಿದರು. ಸಾರ್ವಜನಿಕ ಆಸ್ತಿ–ಪಾಸ್ತಿಗಳ ಬಳಕೆಯಲ್ಲಿ, ಕೆರೆ, ಬಾವಿ, ಕೊಳವೆಗಳಲ್ಲಿ ನೀರನ್ನು ಪಡೆಯುವ ಹಕ್ಕಿಗಾಗಿ ಇಲ್ಲಿನ ದಲಿತರು ಹೋರಾಟವನ್ನು ನಡೆಸಬೇಕಾದ ಅನಿವಾರ್ಯತೆಯನ್ನು ದಲಿತ ಕಾದಂಬರಿಗಳು ದಾಖಲಿಸುತ್ತವೆ. ಅಸ್ಪೃಶ್ಯರೆಂಬ ಕಾರಣಕ್ಕಾಗಿ ಸಾರ್ವಜನಿಕ ಸ್ಥಳಗಳಾದ ಹೋಟೆಲ್, ದೇವಸ್ಥಾನ, ಶಿಕ್ಷಣ ಸಂಸ್ಥೆ ಮುಂತಾದ ಸಾರ್ವಜನಿಕ ಸ್ಥಳಗಳಿಗೆ ದಲಿತ ಪ್ರವೇಶವನ್ನು ನಿರ್ಬಂಧಿಸಿದ್ದ ಮೂಲಭೂತವಾದಿಗಳ

ಕ್ರಮವನ್ನು ಇವರು ಪ್ರಶ್ನಿಸುತ್ತಾರೆ. ಪಾಶ್ಚತ್ಯ ಶಿಕ್ಷಣ ಪದ್ಧತಿಯ ಪರಿಣಾಮದಿಂದಾಗಿ ದಲಿತರು ತಮ್ಮ ಶೋಷಣೆಯ ಬಗ್ಗೆ ಎಚ್ಚರವನ್ನು ಹೊಂದಿದ್ದಾರೆ. ಸಂಪ್ರದಾಯಿಕ ಕೀಳರಿಮೆಯಿಂದ ಹೊರಬಂದು ಶಿಕ್ಷಣ ಹಾಗೂ ತೋಳ್ಬಲದ ಮೂಲಕ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾರೆ.

ದಲಿತರ ವ್ಯಕ್ತಿತ್ವ ಮತ್ತು ಸ್ವಭಾವನ್ನು ಕುರಿತಂತೆ ದಲಿತ ಸಂದರ್ಭದ ಸಾಹಿತ್ಯ ಹೊಸಲೋಕವನ್ನು ತೆರೆದಿಡುತ್ತದೆ. ಅದುವರೆಗೆ ಮೂಕವಾಗಿದ್ದ, ನಿರ್ಭಾವುಕವಾಗಿದ್ದ, ಕೀಳರಿಮೆಯಿಂದ ಬಳಲುತ್ತಿದ್ದ ದಲಿತ ವರ್ಗದವರಲ್ಲಿ ಆತ್ಮ ವಿಶ್ವಾಸವನ್ನು ದಲಿತ ಲೇಖಕರು ತುಂಬಿದ್ದಾರೆ. ಪ್ರೀತಿ–ವಿಶ್ವಾಸ, ನೈತಿಕ ಪ್ರಜ್ಞೆ ಇವುಗಳು ಮೊದಲ ಬಾರಿಗೆ ಅಕ್ಷರ ರೂಪದಲ್ಲಿ ಕಾಣಿಸಿಕೊಂಡಿವೆ. ದಲಿತರ ಸಂಸ್ಕೃತಿಕ ಜಗತ್ತನ್ನು ದಲಿತೇತರರು ಕಂಡಬಗೆಗೂ, ದಲಿತರು ಕಂಡಬಗೆಗೂ ಅಂತರವಿದೆ. ನವೋದಯದ ಸಂದರ್ಭದಲ್ಲಿ ದಲಿತರ ಮನೆ, ಪರಿಸರ, ಮನೆಯ ಹೊರಗೆ ತುಂಬಿರುವ ಹೊಲಸು, ಗಲೀಜು ದಾಖಲಾಗಿವೆ. ಇದಕ್ಕೆ ಅಂದಿನ ಅವರ ಬಡತನ ಆಜ್ಞಾನ ಇವು ಕಾರಣವಾಗಿವೆ. ಆದರೆ ದಲಿತ ಸಾಹಿತ್ಯ ಸಂದರ್ಭದಲ್ಲಿ ದಲಿತರು ಸ್ವತಃ ಜಮೀನು ಹೊಂದಿದ್ದಾರೆ. ಇವರಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರ ಕ್ರಮಕೈಗೊಂಡಿದೆ. ನವೋದಯದ ಸಂದರ್ಭದ ಲೇಖಕರು ತಮ್ಮ ಜಾತಿ ವರ್ಗವನ್ನು ಕುರಿತು ಸ್ವತಃ ಆತ್ಮವಿಮರ್ಶೆ ನಡೆಸಿದ್ದಾರೆ. ದಲಿತ ಲೇಖಕರಿಗೆ ಈ ರೀತಿ ಆತ್ಮವಿಮರ್ಶೆ ಸಾಧ್ಯವಾಗಿಲ್ಲ. ಏಕೆಂದರೆ ಅವರಿಗೆ ಆರ್ಥಿಕ, ಸಾಮಾಜಿಕ ಸಮಸ್ಯೆಗಳೆ ಪ್ರಧಾನವಾದ ಸಮಸ್ಯೆಗಳಾಗಿವೆ. ಇತರ ವಿಚಾರಗಳ ಬಗ್ಗೆ ಅವರ ಲಕ್ಷ್ಯ ಇಲ್ಲದಿರುವುದು ವಿಶೇಷ. ಈ ಅಧ್ಯಯನದಲ್ಲಿ ಕುವೆಂಪು ಸಾಹಿತ್ಯದ ದಲಿತ ಚಿತ್ರಣದ ಸಮಗ್ರ ಸ್ವರೂಪವನ್ನು ನೀಡಲು ಸಾಧ್ಯವಾಗಿಲ್ಲ. ನನ್ನ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟ ವಿಚಾರಗಳನ್ನು ಮಾತ್ರ ಚರ್ಚಿಸಲಾಗಿದೆ. ಕುವೆಂಪು ಕಾದಂಬರಿಗಳಲ್ಲಿನ ದಲಿತ ಚಿತ್ರಣವನ್ನು ವಿವಿಧ ಅಯಾಮಗಳಿಂದ ನೋಡಲು ಇನ್ನೂ ಹಲವು ಅವಕಾಶಗಳಿವೆ.

* * *

# ೭.ಅನುಬಂಧಗಳು

## ೭.೧ ಆಕರ ಗ್ರಂಥಗಳು


೧. ಅರವಿಂದ ಮಾಲಗತ್ತಿ ; **ಕಾರ್ಯ** , ಶೈಲ ಪ್ರಕಾಶನ, ಮುದ್ದೇಬಿಹಾಳ, ೧೯೮೮.

೨. ಕುವೆಂಪು ; **ಕಾನೂರು ಹೆಗ್ಗಡಿತಿ,** ಉದಯರವಿ ಪ್ರಕಾಶನ, ವಾಣೀವಿಲಾಸಪುರಂ. ಮೈಸೂರು -೨೦೦೪ (ಹದಿಮೂರನೆ ಮುದ್ರಣ)

೩. ಕುವೆಂಪು ; **ಮಲೆಗಳಲ್ಲಿ ಮದುಮಗಳು,** ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು- ೧೯೯೨ (ನಾಲ್ಕನೇ ಮುದ್ರಣ)

೪. ದೇವನೂರ ಮಹಾದೇವ : **ಒಡಲಾಳ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು-೧೯೭೪

೫. ದೇವನೂರ ಮಹಾದೇವ : **ಕುಸುಮ ಬಾಲೆ,** ಸಂಗಾತಿ ಸಹಕಾರಿ ಪ್ರಕಾಶನ ವಿಜಯನಗರ, ಬೆಂಗಳೂರು-೧೯೮೮.

೬. ಭೈರಪ್ಪ ಎಸ್. ಎಲ್ : **ದಾಟು** ಸಾಹಿತ್ಯ ಭಂಡಾರ, ಬಳೇಪೇಟೆ ಬೆಂಗಳೂರು-೧೯೭೩.

೭. ಮುಳ್ಳೂರು ನಾಗರಾಜ : **ಮರಣ ಮಂಡಲ ಮಧ್ಯದೊಳಗೆ,** ಹೊಸ ದಿಕ್ಕು ಪ್ರಕಾಶನ, ಬೆಂಗಳೂರು – ೧೯೮೬

೮. ಶಿವರಾಮ ಕಾರಂತ : **ಚೋಮನದುಡಿ,** ಹರ್ಷ ಮುದ್ರಣ ಪ್ರಕಟಣಾಲಯ.ಪುತ್ತೂರು – ೧೯೪೮.

೯. ಶಿವರಾಮ ಕಾರಂತ : **ಕುಡಿಯರ ಕೂಸು** , ಹರ್ಷ ಮುದ್ರಣ ಪ್ರಕಟಣಾಲಯ ಪುತ್ತೂರು – ೧೯೪೮.


* * *

## ೭.೨ ಪರಾಮರ್ಶನ ಗ್ರಂಥಗಳು


೧. ಅನಂತಮೂರ್ತಿ ಯು. ಆರ್. : 'ಪೂರ್ವಾಪರ' ಅಕ್ಷರ ಪ್ರಕಾಶನ ಸಾಗರ ೧೯೯೦.

೨. ಅರವಿಂದ ಮಾಲಗತ್ತಿ : 'ನಾಲ್ಕು ದಲಿತೀಯ ಕಾದಂಬರಿಗಳು' ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು. ೧೯೯೧.

೩. ಅರವಿಂದ ಮಾಲಗತ್ತಿ : 'ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನೆ' ಹೊಸ ದಿಕ್ಕು ಪ್ರಕಾಶನ, ಬೆಂಗಳೂರು-೧೯೮೮.

೪. ಅಶೋಕ ಟಿ. ಪಿ. : 'ಕುವೆಂಪು ಕಾದಂಬರಿ ಎರಡು ಅಧ್ಯಾಯಗಳು,' ಅಕ್ಷರ ಪ್ರಕಾಶನ, ಸಾಗರ, ೨೦೦೪.

೫. ಅಶೋಕ ಟಿ. ಪಿ : 'ಸಾಹಿತ್ಯ ಸಂದರ್ಭ' ಅಕ್ಷರ ಪ್ರಕಾಶನ, ಸಾಗರ-೧೯೯೧.

೬. ಆಮೂರ. ಜಿ. ಎಸ್ : 'ಕನ್ನಡ ಕಥನ ಸಾಹಿತ್ಯ ಕಾದಂಬರಿ' ಶ್ರೀಹರಿ ಪ್ರಕಾಶನ, ಧಾರವಾಡ-೧೯೯೪

೭. ಇನಾಂದರ್ ವಿ. ಎಂ : 'ಕುವೆಂಪು ಕಾದಂಬರಿಗಳು' ಉಷಾ ಸಾಹಿತ್ಯಮಾಲೆ ಮೈಸೂರು-೧೯೭೯.

೮. ಉದ್ದಂಡಯ್ಯ : 'ಕುವೆಂಪು ಕಥನ' ಅಧ್ಯಯನ ಮಂಡಲ, ಬೆಂಗಳೂರು-೨೦೦೪.

೯. ಒಡೆಯರ್ ಡಿ. ಹೆಗ್ಗಡೆ : 'ಶ್ರೀ ಕುವೆಂಪು ದರ್ಶನ' ಪ್ರೋ. ಒಡೆಯರ್ ಡಿ. ಹೆಗ್ಗಡೆ, ರಾಮಕೃಷ್ಣನಗರ, ಮೈಸೂರು-೨೦೦೪.

೧೦. ಕೀರ್ತಿನಾಥ ಕುರ್ತುಕೋಟಿ : 'ವಿಮರ್ಶೆಯ ವಿನಯ ಕಾದಂಬರಿ' ಮನೋಹರ ಗ್ರಂಥಮಾಲ, ಧಾರವಾಡ-೧೯೮೨.

೧೧. ಕೃಷ್ಣಕುಮಾರ್ ಸಿ. ಪಿ. : 'ಕುವೆಂಪು ಸಾಹಿತ್ಯ ಸಂಧಾನ' ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು-೧೯೯೫.

೧೨. ಕೃಷ್ಣಮೂರ್ತಿ ಎಂ. ಜಿ. : ಕೃತಿ ಸಂಸ್ಕೃತಿ, ಋಜುವಾತು ಪ್ರಕಾಶನ, ಮೈಸೂರು : ೧೯೯೪

೧೩. ಗಣೇಶ್ ಮೊಗಳ್ಳಿ : 'ದಲಿತ ಕಥನ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೬.

೧೪. ಗುರುಪಾದ ಮರಿಗುದ್ದಿ : 'ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ' ಸಹ್ಯಾದ್ರಿ ಪ್ರಕಾಶನ, ಮೈಸೂರು - ೧೯೮೯.

೧೫. ಚಂದ್ರಶೇಖರ ನಂಗಲಿ (ಸಂ) : 'ವಚನ ಸಾಹಿತ್ಯ' ನವಕರ್ನಾಟಕ ಪ್ರಕಾಶನ, ಬೆಂಗಳೂರು. ೨೦೦೫.

೧೬. ಚನ್ನಯ್ಯ : 'ಪ್ರಾಸಂಗಿಕ' ನೆಲಮನೆ ಪ್ರಕಾಶನ, ಮೈಸೂರು - ೧೯೮೩.

೧೭. ಚನ್ನಬಸಪ್ಪ ಕೋ : 'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ' ಸಾಮಾಜಿಕ ನಿಷ್ಠೆ ನವಕರ್ನಾಟಕ ಪ್ರಕಾಶನ, ಬೆಂಗಳೂರು-೨೦೦೪

೧೮. ಜವರೇಗೌಡ ದೇ(ಸಂ) : 'ನೆನಪಿನ ದೋಣಿಯಲ್ಲಿ ಯಾತ್ರೆ' ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು-೧೯೮೧.

೧೯. ಜವರೇಗೌಡ ದೇ : 'ಕುವೆಂಪು ದರ್ಶನ ಮತ್ತು ಸಂದೇಶ' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೮೫ (ಎರಡನೆ ಮುದ್ರಣ)

೨೦. ಜವರೇಗೌಡ ದೇ : 'ರಾಷ್ಟ್ರಕವಿ ಸಂದರ್ಶನ' ಸಹ್ಯಾದ್ರಿ ಪ್ರಕಾಶನ ಮೈಸೂರು-೧೯೮೮.

೨೧. ಜವರೇಗೌಡ ದೇ. : 'ಏಳು-ಸೀಳು' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೭೬.

೨೨. ತಾರಾನಾಥ ಎನ್. ಎಸ್(ಸಂ) : 'ಶತಮಾನದ ಸಂಶೋಧನೆ' ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡಭವನ, ಬೆಂಗಳೂರು. ೨೦೦೧.

೨೩. ತಿಪ್ಪೇರುದ್ರಸ್ವಾಮಿ ಎಚ್ : 'ಕುವೆಂಪು ಅವರ ವೈಚಾರಿಕತೆ' ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು-೧೯೯೩.

೨೪. ನಂಜುಂಡೇಗೌಡ ಜೆ. ಆರ್. : 'ಕುವೆಂಪು ಸಾರಸ್ವತ ಲೋಕ' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೮೧.

೨೫. ನಾಗಭೂಷಣ ಡಿ. ಎಸ್ : 'ಗಮನ' ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ-೧೯೯೦.

೨೬. ನಾಗರಾಜ ಡಿ. ಆರ್. : 'ಅಮೃತ ಮತ್ತು ಗರುಡ' ಅಕ್ಷರ ಪ್ರಕಾಶನ, ಸಾಗರ-೨೦೦೩.

೨೭. ನಾರಾಯಣ ಕೆ. ವಿ : 'ಬೇರು ಕಾಂಡ ಚಿಗುರು' ವಿವೇಕ ಪ್ರಕಾಶನ ಲಕ್ಕ ಸಂದ್ರ, ಬೆಂಗಳೂರು. ೧೯೯೭.

೨೮. ನಾರಾಯಣಸ್ವಾಮಿ ಜಿ. ಹೋ : 'ಚೈತನ್ಯಯ ರೂಪಿ ಕುವೆಂಪು' ಸಿ. ವಿ. ಜಿ. ಪಬ್ಲಿಕೇಷನ್ಸ್, ಬೆಂಗಳೂರು. ೨೦೦೪.

೨೯. ಪರಮೇಶ್ವರ ಭಟ್ಟ ಎಸ್. ವಿ. : 'ರಸಋಷಿ ಕುವೆಂಪು' ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾಲಯ, ಮೈಸೂರು-೨೦೦೧.

೩೦. ಬೋರಲಿಂಗಯ್ಯ ಎಸ್. : 'ಕನ್ನಡ ಸಾಹಿತ್ಯ ಸಂದರ್ಭ ಮತ್ತು ಕುವೆಂಪು' ದಾರಿ ದೀಪ ಪ್ರಕಾಶನ, ಮೈಸೂರು-೨೦೦೫.

೩೧. ಭಗವಾನ್ ಕೆ. ಎಸ್ : 'ಬದಲಾವಣೆ' ಮಹಿಮಾ ಪ್ರಕಾಶನ, ಕುವೆಂಪುನಗರ, ಮೈಸೂರು - ೧೯೯೩. (೪ನೇ ಮುದ್ರಣ)

೩೨. ಭಗವಾನ್ ಕೆ. ಎಸ್ : 'ಕುವೆಂಪುಯುಗ' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೯೦.

೩೩. ಭೂಮಿಗೌಡ : 'ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು' ಚೇತನ ಬುಕ್ ಹೌಸ್, ಮೈಸೂರು-೨೦೦೪.

೩೪. ಭೈರಪ್ಪ ಎಸ್. ಎಸ್ : 'ದಾಟು' ಸಾಹಿತ್ಯ ಭಂಡಾರ ಬೆಂಗಳೂರು-೧೯೭೩.

೩೫. ಮಂಜುನಾಥನ್ ಜಿ. ಜಿ. : 'ಕುವೆಂಪು ಸಾಹಿತ್ಯದ ಕೆಲವು ಆಯಾಮಗಳು' ಸಹ್ಯಾದ್ರಿ ಪ್ರಕಾಶನ, ಮೈಸೂರು-೨೦೦೩.

೩೬. ರಮೇಶ್ ಜೆ. ಕೆ. : 'ಕಲ್ಲುಸಾರ' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು-೨೦೦೪.

೩೭. **ರಹಮತ್ ತರೀಕೆರೆ (ಸಂ)** : 'ಮಾತು ತಲೆಯೆತ್ತುವ ಬಗೆ' ಪ್ರಸಾರಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ-೨೦೦೫.

೩೮. **ರಹಮತ್ ತರೀಕೆರೆ** : 'ಪ್ರತಿ ಸಂಸ್ಕೃತಿ' ಕನ್ನಡ ಸಂಘ; ಕ್ರೈಸ್ಟ್ ಕಾಲೇಜು, ಬೆಂಗಳೂರು-೧೯೯೩.

೩೯. **ರಾಜಾರಾಮ ಹೆಗಡೆ** : 'ಗತ-ಕಥನ' ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ-೨೦೦೫.

೪೦. **ರಾಜೇಂದ್ರ, ಚೆನ್ನಿ** : 'ಅಮೂರ್ತತೆ ಮತ್ತು ಪರಿಸರ' ಅಭಿನವ ಪ್ರಕಾಶನ, ಬೆಂಗಳೂರು-೨೦೦೩.

೪೧. **ರಾಮಕೃಷ್ಣ ಜಿ.** : 'ಮುನ್ನೋಟ' ಮಾ-ಲೆ ಪ್ರಕಾಶನ, ಕಾವೇರಿನಗರ, ಬೆಂಗಳೂರು ೨೦೦೫.

೪೨. **ರಾಮಚಂದ್ರಪ್ಪ ಬರಗೂರು** : 'ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ' ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು - ೨೦೦೧.

೪೩. **ಲಕ್ಕಪ್ಪಗೌಡ ಎಸ್. ಜಿ.** : 'ಸಾಹಿತ್ಯ ಬಹುಮುಖಿ ಚಿಂತನೆ' ಸಿ. ವಿ. ಜಿ. ಪಬ್ಲಿಕೇಷನ್, ಬೆಂಗಳೂರು ೨೦೦೩.

೪೪. **ವಿವಿಧ ಲೇಖಕರು** : 'ಕುವೆಂಪು ವಿಚಾರ ದರ್ಶನ' ಕನ್ನಡ ಸಂಘರ್ಷ ಸಮಿತಿ ಬೆಂಗಳೂರು-೧೯೮೯.

೪೫. **ವೀರಣ್ಣ ಸಿ.** : 'ಸಾಹಿತ್ಯ ಮತ್ತು ಸಮುದಾಯ' ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು-೧೯೮೩.

೪೬. **ವೇಣುಗೋಪಾಲರಾವ್ ಎ. ಎಸ್.**: 'ಶ್ರೀ ಕುವೆಂಪು ಅವರ ದಾರ್ಶನಿಕ ವಿಚಾರಗಳು' ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕುಪ್ಪಳ್ಳಿ-೧೯೯೪.

೪೭. **ಶಿವರಾಮಯ್ಯ** : 'ಉರಿಯ ಉಯ್ಯಾಲೆ' ಸಿ. ವಿ. ಜಿ. ಪಬ್ಲಿಕೇಷನ್, ಬೆಂಗಳೂರು-೨೦೦೨.

೪೮. **ಶಿವರಾಮ ಕಾಡನ ಕುಪ್ಪೆ** : 'ಕುವೆಂಪು ಸಾಹಿತ್ಯ ಸಾಹಿತ್ಯ ವಿಚಾರ' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೯೦.

೪೯. **ಶೈಲಜ ಹಿರೇಮಠ** : 'ಸ್ತ್ರೀ ಕಥನ' ಭುವನ ಪ್ರಕಾಶನ' ಹೊಸಪೇಟೆ - ೨೦೦೩.

೫೦. **ಸುಧಾಕರ** : 'ಕುವೆಂಪು ಸಾಹಿತ್ಯ ಸಂವೀಕ್ಷಣೆ' ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೮೮.

೫೧. **ಸೋಮಶೇಖರ ಗೌಡ** : 'ಕುವೆಂಪು : ಅನುಸಂದಾನ' ಸಿ. ವಿ. ಜಿ. ಪಬ್ಲಿಕೇಷನ್ಸ್, ಬೆಂಗಳೂರು-೨೦೦೪.

೫೨. **ಹನುಮಂತಯ್ಯ ಎಲ್** : 'ಕಥಾ ಕಥನ' ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು-೧೯೯೯.

* * *

## ೭.೩ ಪರಾಮರ್ಶನ ಲೇಖನಗಳು

೧. **ಅನುಪಮಾ ನಿರಂಜನ** : ದಲಿತ ಸಾಹಿತ್ಯ ಗೋಷ್ಠಿ-ಅಧ್ಯಕ್ಷರ ಭಾಷಣ ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ - ೧೯೮೧. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳುರು-೧೯೮೧.

೨. **ಅರವಿಂದ ಮಾಲಗತ್ತಿ (ಸಂ)** : ಕೃತಿ ವಿಮರ್ಶೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು-೨೦೦೬.

೧. ಕಾನೂರು ಹೆಗ್ಗಡಿತಿ - **ಕೆ.ವಿ. ಸುಬ್ಬಣ್ಣ**

೨. ಕಾನೂರು ಹೆಗ್ಗಡಿತಿ - **ಬಸವರಾಜ ಕಟ್ಟೀಮನಿ.**

೩. ಮಲೆಗಳಲ್ಲಿ ಮದುಮಗಳು - **ಶ್ರೀ ಕೃಷ್ಣ ಅಲನಹಳ್ಳಿ.**

೪. ಮಲೆಗಳಲ್ಲಿ ಮದುಮಗಳು - **ಎಚ್. ಎಂ. ಚನ್ನಯ್ಯ**

೫. ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಹಾಗೂ ಸಂಸ್ಕೃತಿ - **ಜಿ. ಎಸ್. ಆಯೂರ.**

೬. ಕುವೆಂಪು ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕಗಳು - **ಬಿ. ಎನ್. ಸುಮಿತ್ರಾ ಬಾಯಿ**

೨. **ಅರವಿಂದ ಮಾಲಗತ್ತಿ** :

**ಕೆ. ಭೈರಪ್ಪ (ಸಂ)** : ಕುವೆಂಪು ಪುನರ್ಮನನ, ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು-೨೦೦೪.

೧. ಕುವೆಂಪು ಕಾದಂಬರಿಗಳಲ್ಲಿ ದಲಿತ ಲೋಕ- **ಕೆ. ಆರ್. ದುರ್ಗಾದಾಸ್**

೩. **ಗಣೇಶ್, ಮೊಗಳ್ಳಿ (ಸಂ)** : ದಲಿತ ಚಿಂತನೆ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೨೦೦೨.

೧. ಶೂದ್ರ ಶಾಹಿಯಿಂದ ಪುರೋಹಿತ ಶಾಹಿಯಡೆಗೆ - **ದೇವಯ್ಯ ಹರವೆ**

೨. ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರ - **ಬಿ. ಕೃಷ್ಣಪ್ಪ**

೪. **ಚಂದ್ರಶೇಖರ ಟಿ. ಆರ್(ಸಂ)** : ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೫.

೧. ಜಾತಿಯ ಯಜಮಾನ್ಯ ಮತ್ತು ವೈದಿಕ ಪರಂಪರೆ - **ಎಸ್. ಎಸ್ ಹಿರೇಮಠ**

೨. ದೇಸಿ ಪರಂಪರೆ ಮತ್ತು ದಲಿತ ಸಾಹಿತ್ಯ - **ಟಿ.ಆರ್. ಚಂದ್ರಶೇಖರ್**

೩. ಸಮಕಾಲೀನ ದಲಿತ ಸಾಹಿತ್ಯದ ಸವಾಲುಗಳು ಮತ್ತು ಸಾಧ್ಯತೆಗಳು - **ಎಸ್. ಕೆ. ಹನುಮಂತಯ್ಯ.**

೪. ಬುದ್ಧ, ಬಸವ, ಮಾರ್ಕ್ಸ್, ಗಾಂಧಿ, ಲೋಹಿಯಾ ಮತ್ತು ಅಂಬೇಡ್ಕರ್ - **ಬಿ. ವಿ. ವೀರಭದ್ರಪ್ಪ**

೫. ಚನ್ನಪ್ಪ ಎಸ್(ಸಂ) : ಕುವೆಂಪು ಸಾಹಿತ್ಯವಲೋಕನ ಕುವೆಂಪು ವಿಚಾರ ವೇದಿಕೆ, ಟಿ. ಕೆ. ಬಡಾವಣೆ, ಮೈಸೂರು-೨೦೦೪.

೧. ಕುವೆಂಪು ಮತ್ತು ಸಾಹಿತ್ಯ ಚಳುವಳಿ-ಲಕ್ಷ್ಮೀನಾರಾಯಣ ಅರೋರ.

೬. ನಾಗಭೂಷಣ ಡಿ. ಎಸ್ (ಸಂ): ಕುವೆಂಪು ಒಂದು ಪುನರನ್ವೇಷಣೆ, ಲೋಹಿಯಾ ಪ್ರಕಾಶನ, ಬಳ್ಳಾರಿ-೨೦೦೪.

೧. ಕುವೆಂಪು ಸಾಹಿತ್ಯದಲ್ಲಿ ದಮನಿತವಾದದ ಸುಳಿವುಗಳು – **ಧರಣೀದೇವಿ ಮಾಲಗತ್ತಿ**

೨. ಮಲೆನಾಡ ಸಂಸ್ಕೃತಿಯ ವಿಕಾಸದ ಕತೆಯಾಗಿ ಕುವೆಂಪು – **ಎಲ್. ಸಿ. ಸುಮಿತ್ರಾ**

೩. ಶೂದ್ರ ಸಂಸ್ಕೃತಿಯ ವಿಮರ್ಶಕರಾಗಿ ಕುವೆಂಪು– **ಹಿ. ಶಿ. ರಾಮಚಂದ್ರೇಗೌಡ**

೭. ಭಟ್ಟ ಜಿ. ಎಸ್. (ಸಂ) : ಕುವೆಂಪು ಸಾಹಿತ್ಯ ಕೆಲವು ನೋಟಗಳು, ಚೇತನ ಬುಕ್ ಹೌಸ್, ಮೈಸೂರು-೧೯೮೯.

೧. ಮಲೆಗಳಲ್ಲಿ ಮದುಮಗಳು – **ಎಚ್. ಎಂ. ಚನ್ನಯ್ಯ**

೮. ಮರುಳಯ್ಯ ಸಾ. ಶಿ (ಸಂ) : ಅನಿಕೇತನ, ಸ್ವಪ್ನಬುಕ್ ಹೌಸ್, ಬೆಂಗಳೂರು-೨೦೦೫.

೧. ಕುವೆಂಪು ಕೃತಿಗಳಲ್ಲಿ ವರ್ಣ-ವರ್ಗ-ಸಂಘರ್ಷ – **ಡಿ. ಆರ್. ನಾಗರಾಜ್**

೨. ಮಲೆಗಳಲ್ಲಿ ಮದುಮಗಳು : ಒಂದು ವಿವೇಚನೆ – **ಎಚ್. ಜೆ. ಲಕ್ಕಪ್ಪಗೌಡ**

೩. ಕುವೆಂಪು ಕಾದಂಬರಿಗಳಲ್ಲಿ : ಪ್ರಾದೇಶಿಕತೆ – **ಕೆ. ಎಸ್. ನಿಸಾರ್ ಅಹಮದ್**

೪. ಕುವೆಂಪು ಮತ್ತು ದಲಿತ ಸಂವೇಧನೆ – **ಕರೀಗೌಡ ಬೀಚನಹಳ್ಳಿ.**

೯. ರಾಘವೇಂದ್ರರಾವ್ಎಚ್.ಎಸ್ : ಶತಮಾನದ ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨೦೦೧.

೧. ದಲಿತ ಸಾಹಿತ್ಯ ಕೆಲವು ತಾತ್ವಿಕ ಚಿಂತನೆಗಳು – **ದೇವಯ್ಯ ಹರವೆ.**

೧೦. ರಾಘವೇಂದ್ರ ಪಾಟೀಲ :

ಚಿದಂಬರರಾವ್ಎನ್.ಎಸ್ (ಸಂ) : ಸಂಕಿರಣ, ಸಾಹಿತ್ಯಸಂಘ, ಜೂನಿಯರ್ ಕಾಲೇಜು, ಮಲ್ಲಡಿಹಳ್ಳಿ-೧೯೭೯.

೧. ಕುವೆಂಪು ಕಾದಂಬರಿಗಳು – **ಪ್ರಹ್ಲಾದ ಕುಮಾರ ಭಾಗೋಜಿ.**

೧೧. ರಾಜಗೋಪಾಲಚಾರ್ಯ : ನವನೀತ (ಪ್ರೋ : ವಿ. ಎಂ. ಇನಾಂದರ್ ಅಭಿನಂದನಾ ಗ್ರಂಥ) ಗೀತಾ ಬುಕ್ ಹೌಸ್, ಮೈಸೂರು-೧೯೮೮೪.

೧. ಕುವೆಂಪು ಕಾದಂಬರಿಗಳ ಒಂದು ಪರಿಚಯ – **ಗಣರಾಜ್ ಕುಂಬ್ಳೆ.**

೧೨. ರಾಜೇಗೌಡ ಹ. ಕ. (ಸಂ). : ಕುವೆಂಪು ಸಾಹಿತ್ಯಲೋಕ-೧, ಕುವೆಂಪು ಅಧ್ಯಯನ ಕೇಂದ್ರ, ರಾಜಾಜಿನಗರ, ಬೆಂಗಳೂರು-೧೯೮೩

೧. ಕುವೆಂಪು ಕಾದಂಬರಿಗಳು – **ಎಚ್. ತಿಪ್ಪೇರುದ್ರಸ್ವಾಮಿ**

೨. ಕುವೆಂಪು ಕಾದಂಬರಿಗಳ ಬಂಧ ಮತ್ತು ವಿನ್ಯಾಸ – **ಜಿ. ಜಿ. ಮಂಜುನಾಥನ್**

**೧೩. ರಾಜೇಂದ್ರ ಚೆನ್ನಿ (ಸಂ)** : ಸಾಹಿತ್ಯ ವಿಮರ್ಶೆ –೧೯೯೮. ಕರ್ನಾಟಕ ಸಾಃಇತ್ಯ ಅಕಾಡೆಮಿ, ಬೆಂಗಳೂರು–೧೯೮೮.

೧. ದಲಿತ ಚಳುವಳಿ ಮತ್ತು ಸಂವೇದನಾ ಶೀಲನೆ – **ಯು. ಆರ್ ಅನಂತಮೂರ್ತಿ**

**೧೪. ಶಿವರುದ್ರಪ್ಪ ಜಿ. ಎಸ್.(ಸಂ)** : ಶ್ರೀ ಕುವೆಂಪು, ಪ್ರಸಾರಾಂಗ, ಬೆಂ. ವಿ. ವಿ. ಬೆಂಗಳೂರು ೨೦೦೩.

೧. ಪರಂಪರೆ ಮತ್ತು ಕುವೆಂಪು – **ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

**೧೫. ಶಿವರುದ್ರಪ್ಪ ಜಿ. ಎಸ್.** : ಕಾಡಿನ ಕವಿ ಕುವೆಂಪು ಕೆಲವು ಪ್ರಸಂಗಗಳು, ಕಸ್ತೂರಿ ಮಾಸಿಕ ಪತ್ರಿಕೆ. ಜನವರಿ ೧೯೯೫.

**೧೬. ಶಿವಾರೆಡ್ಡಿ ಕೆ. ಪಿ.** :
**ಸೋಮಶೇಖರ್ ಎಸ್. ವೈ.(ಸಂ).**: ಕುವೆಂಪು ವಿಚಾರ ಧಾರೆಯ ಪ್ರಸ್ತುತತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೪.

೧. ಕುವೆಂಪು ಕೃತಿಗಳಲ್ಲಿ ಬ್ರಾಹ್ಮಣದ ವಿರೋಧ ಹಾಗೂ ಚಿಂತನೆ

**– ಬಂಜಗೆರೆ ಜಯಪ್ರಕಾಶ್.**

**೧೭. ಶ್ರೀನಿವಾಸ ಶೂದ್ರ (ಸಂ)** : ಕುವೆಂಪು–೯೦ ಶೂದ್ರ ಪ್ರಕಾಶನ, ಬೆಂಗಳೂರು– ೧೯೯೫.

೧. ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆಯ ಪ್ರಕ್ರಿಯೆ–ಚಂದ್ರಶೇಖರ ನಂಗಲಿ.

**೧೮. ೧೯೮೦ ರ ಬೆಳಗಾವಿ ಸಾಹಿತ್ಯ ಸಮ್ಮೇಳನದಲ್ಲಿ ಮಡಿಸಲಾದ ಲೇಖನಗಳು :**

ಪ್ರಕಟಣೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೮೦.

೧. ಹಿಂದೂ ಸಂಪ್ರದಾಯದಲ್ಲಿ ದಲಿತರು – **ಆರ್. ವಿ. ಭಂಡಾರಿ**

೨. ಕರ್ನಾಟಕದಲ್ಲಿ ದಲಿತರ ಸಮಸ್ಯೆಗಳು – **ಜಿ. ಬಿ. ವಿಸಾಜಿ.**

೩. ದಲಿತ ಸಾಹಿತ್ಯ – **ಪಿ. ವಿ. ವಜ್ರ ಮಟ್ಟಿ**

* * *

